ಮನೋಹರ ಗ್ರಂಥಮಾಲೆಯ ಎರಡನೆಯ ಕುಸುಮ

# ನವಿಲುಗರಿ

(ಕತೆಗಳ ಸಂಗ್ರಹ)

ಸಂಪಾದಕರು:

**ಬೆಟಗೇರಿ ಕೃಷ್ಣಶರ್ಮ**

**ಜಿ. ಬಿ. ಜೋಶಿ**

ಅಕ್ಟೋಬರ ೧೯೩೩

ಬೆಲೆ ೦-೧೨-೦

# ಬಿನ್ನಹ

ನಮ್ಮ ಗ್ರಂಥಮಾಲೆಯು ಎರಡನೆಯ ಅಡಿಯನ್ನು ಮುಂದಿರಿಸು ತ್ತಿರುವುದು ನಮಗೆಲ್ಲ ಹಿಗ್ಗು–ಹೆಮ್ಮೆಯ ವಿಷಯ. ರಸದೇವತೆಯ ನರ್ತನಕ್ಕೆ ನಮ್ಮ ಮಾಲೆಯ ಗ್ರಂಥಗಳು ರಂಗಮಂಟಪವಾಗಬೇಕೆಂದು ನಮ್ಮ ಬಯಕೆ; ಆ ಮಂಟಪವನ್ನು ಬಗೆಬಗೆಯ ಕುಸುರು ಕಮಾನು ಗಳಿಂದ ಸಿಂಗರಿಸಬೇಕೆಂದು ನಮ್ಮ ಲವಲವಿಕೆ; ಆದರೆ–ಸಿಂಗರಿಸುವ ಸಿಲ್ಪಿಗಳ ಹೊಟ್ಟೆಗೇನೂ ದೊರೆಯದಿದ್ದರೆ ಹೋಗಲಿ–ಬೇಕಾಗುವ ಅಲಂ ಕಾರ ಸಾಮಗ್ರಿಗಳನ್ನು ಒದಗಿಸಿಕೊಡುವ ಭಾರವನ್ನಾದರೂ ನಮ್ಮ ಕನ್ನಡ ವಾಚಕವರ್ಗವು ವಹಿಸಿದರೆ ಸಾಕು. ನಮ್ಮ ಬಯಕೆ ಲವಲವಿಕೆ ಗಳು ನೆರವೇರುವುದಕ್ಕೇನೂ ತಡೆಯಿಲ್ಲ.

ನವಿಲುಗರಿಯ ವಿವಿಧವರ್ಣಗಳ ಮಧುರಸಂಮಿಶ್ರಣದ ಬೆಡಗು ನಯನಮನೋಹಾರಿಯಾಗಿರುವುದು. ಅದರಂತೆಯೇ ನಮ್ಮ ಈ "ನವಿಲುಗರಿ"ಯಲ್ಲಿಯ ಬೇರೆಬೇರೆ ಕತೆಗಾರರ ವಿವಿಧ ಭಾವವರ್ಣಗಳ ಮಧುರಮೀಲನದ ಕಮನೀಯತೆಯು, ಹೃದಯಮನೋಹಾರಿಯಾಗ ದಿರದೆಂದು ನಮ್ಮ ಭರವಸೆ. ನಮ್ಮ ಬೇಡಿಕೆಯನ್ನು ಮನ್ನಿಸಿ, ವೇಳೆಗೆ ಸರಿಯಾಗಿ ಕತೆಗಳನ್ನೊದಗಿಸಿಕೊಟ್ಟ ಕತೆಗಾರರೆಲ್ಲರಿಗೂ ನಮ್ಮ ಕೃತಜ್ಞ ತೆಯ ಪ್ರಣಾಮಗಳು. ಪ್ರೊ. ಮುಗಳಿ ರಂಗನಾಥರಾಯರು ಅಭ್ಯಾಸಿ ಗಳಿಗೆ ಅನುಕೂಲವಾಗುವಂತೆ, ಸಣ್ಣಕತೆಗಳ ಉತ್ಪತ್ತಿ, ಉಪಪತ್ತಿ ವಿಚಾರವನ್ನೊಳಗೊಂಡ ಮುನ್ನುಡಿಯನ್ನು ಬರೆದುಕೊಟ್ಟು ನಮ್ಮನ್ನು ಋಣಿಗಳನ್ನಾಗಿ ಮಾಡಿದ್ದಾರೆ.

ನಮ್ಮ ಗ್ರಂಥಮಾಲೆಯ ಪ್ರಕಟನೆಯನ್ನು ನಿರಪೇಕ್ಷಬುದ್ಧಿಯಿಂದ ಪ್ರಕಟಿಸಿದ ಬೇರೆಬೇರೆ ಪತ್ರಿಕೆಗಳ ಒಡೆಯರ ಉಪಕಾರವೂ ನಮ್ಮಮೇಲೆ ಬಹಳವಾಗಿದೆ. ಈ ಸಲದ ನಮ್ಮ ಗ್ರಂಥದಲ್ಲಿ, ವಿನಿಮಯವಾಗಿ ಆ ಆ ಪತ್ರಿಕೆಗಳ ಪ್ರಕಟನೆಗಳನ್ನು ಪ್ರಕಟಿಸಬೇಕೆಂದಿದ್ದೆವು. ಆದರೆ ಗ್ರಂಥ

ಪ್ರಕಾಶನಕ್ಕೆ ತಡೆಯಾಗುವುದೆಂದು, ಅನಿವಾರ್ಯವಾಗಿ ಬಿಡಬೇಕಾಯಿತು. ಅದಕ್ಕಾಗಿ ಯಾರೂ ವಿಪರೀತವನ್ನು ಭಾವಿಸದೆ ನಮ್ಮನ್ನು ಕ್ಷಮಿಸಬೇಕಾಗಿ ಬೇಡುವೆವು. ಮುಂದಿನ ಗ್ರಂಥದಲ್ಲಿ ಅವಶ್ಯವಾಗಿಯೂ ವಿನಿಮಯದ ಪ್ರಕಟನೆಗಳನ್ನು ಪ್ರಕಟಿಸುವೆವು.

ನಮ್ಮ ಗ್ರಂಥಗಳು ಅಚ್ಚುಕಟ್ಟಾಗಿ ಹೊರಡುವಂತೆ ತಮ್ಮಿಂದಾದಷ್ಟು ಪ್ರಯತ್ನ ಮಾಡುತ್ತಿರುವ ಮೋಹನ ಮುದ್ರಣಾಲಯದ ಒಡೆಯರಾದ **ಶ್ರೀ. ಕೆ. ಜಿ. ರಾಯದುರ್ಗ** ಇವರಿಗೆ ತುಂಬಾ ಋಣಿಯಾಗಿದ್ದೇವೆ.

ಸಾಧನಕೇರಿ<br>
ತಾ. ೩-೧೦-೧೯೩೩<br>
ಸೀಗೆಹುಣ್ಣಿವೆ

ಸಂಪಾದಕರು,

**ಮನೋಹರ ಗ್ರಂಥಮಾಲಾ**

# ಮುನ್ನುಡಿ

ಈ ಸಂಗ್ರಹದಲ್ಲಿ ಹರಹಿದ ಕತೆಗಳ '**ನವಿಲುಗರಿ**' ಗಾಗಿ ಇದು ಮುನ್ನುಡಿಯ ಮುಂಗೊಡೆ, ನವಿಲ ತಲೆಕಟ್ಟಾದ ಕಿರುಗೊಡೆ. ನಿಜವಾಗಿ ಸಣ್ಣ ಕತೆಯೊಂದು ನವಿಲು, ಅದು ಕಾದಂಬರಿಯ ಶಾಹಾಮೃಗವೂ ಅಲ್ಲ, ತೀರ ಕಿರುಗತೆಯ ಕೋಗಿಲೆಯೂ ಅಲ್ಲ. ಅದಕ್ಕೊಂದು ಸ್ವತ್ವ ವಿದೆ. ನೆಲದಲ್ಲಿ ಬೆಡಗಿನಿಂದ ನಡೆದರೂ ಮುಗಿಲಲ್ಲಿ ಹಾರಬಲ್ಲುದು. ಗೋಣು ಬೇಕಷ್ಟು ಕಿರಿದಾದರೂ ಸಾಕಷ್ಟು ನೀಳವಾದುದು ಕಣ್ಣು ಸಣ್ಣವಾದರೂ ಕೊಕ್ಕಿನಲ್ಲಿ ಸಿರಿಯಿದೆ. ಕೇಕೆಯಲ್ಲಿ ಕೊರಗಿದೆ, ಹೊಟ್ಟೆಯಲ್ಲಿ ಹುಮ್ಮಸಿದೆ. ಗರಿಯಲ್ಲಿ ವೈವಿಧ್ಯದ ದುಂದು ಇದೆ, ನಡೆಯಲ್ಲಿ ಸ್ವಾತಂತ್ರ್ಯದ ಹೆಮ್ಮೆ ಇದೆ. ಇಂಥ ಈ ಸಣ್ಣಕತೆಯ ವ್ಯಕ್ತಿವಿಶೇಷವನ್ನೂ, ಕನ್ನಡದಲ್ಲಿ ಅದು ಈ ವರೆಗೆ ಬೆಳೆದು ಬಂದ ಬಗೆಯನ್ನೂ ಕುರಿತು, ಈ ಗ್ರಂಥಮಾಲೆಯವರು ಮಮತೆಯಿಂದ ಕೇಳಿದ ಮೇರೆಗೆ, ಕಿರಿದರೊಳಗೆ ಕೆಲವು ಮಾತುಗಳನ್ನು ಬರೆಯುವೆನು.

ಕತೆ ಹೇಳುವ ಕಲೆಯು ತೀರ ಹಳೆಯದು; ಕೂಡಿಯುಂಬ ಕೆಲೆವ ಜನದ ಜಂಗುಳಿಯೊಡನೆ ಅದು ಜನ್ಮವೆತ್ತಿದೆ. ಸಮಾಜವೆಂಬಲ್ಲಿ ಸಹೃದಯತೆ, ಕಲ್ಪಕತೆ ಇವು ಇರಲೇಬೇಕು. ಅವುಗಳ ಒಡಲಿಂದ ಹುಟ್ಟುವ ಸಹಜತರವಾದ ಮೊದಲ ಕಲೆಯು ಕತೆಗಾರಿಕೆ. ಅದು ಯಾವುದೊಂದು ಕಾಲದ ಇಲ್ಲವೆ ಮತದ ಸೊತ್ತಲ್ಲ. ಅಂತೆಯೆ ಯಾವ ಭಾಷೆಯೇ ಆಗಲಿ, ಅದನ್ನಾಡುವ ಜನರ ಬಳಕೆಯಲ್ಲಿ ಸನಾತನವಾಗಿ ಕತೆಯ ರಾಸಿರಾಸಿ ಇಲ್ಲದೆ ಇಲ್ಲ. ಅದಕ್ಕೆ ಬರೆಹದ ಚಿರಮುದ್ರೆ ದೊರೆಯದಿದ್ದರೂ ಅದು ಬಾಯಿಂದ ಬಾಯಿಗೆ, ಗಾಳಿಯಲ್ಲಿ ತನ್ನ ತಾನೆ ಬರೆದುಕೊಂಡು, ಬಾಳಿ ಬೆಳಗಿ, ಹೋಗುತ್ತದೆ. ಅಂಥ ಸುಳಿಗತೆಯ ಅಮುದ್ರಿತ ಸಮುದ್ರವೇ ಯಾವಾಗಲೂ ಬಹಳ. ಆದರೂ ಬರೆದಿಟ್ಟ ಹಳೆಯ ಕತೆಗಳನ್ನು ನೋಡಲು, ಉದ್ದವಾದ ಕಿರಿದಾದ ಕತೆಗಳೆರಡೂ ಇವೆಯಾದರೂ ಈಗ ಸಣ್ಣಕತೆಯೆಂದು ಕರೆಯುವ ಜಾತಿಯ ಕತೆಗಳು ವಿರಳವೆಂದೇ ತೋರುತ್ತದೆ. ಇದು ಕನ್ನಡದಂತೆ ಉಳಿದ ಭಾಷೆಗಳಿಗೂ ಅನ್ವಯಿಸುತ್ತದೆ. ಪ್ರಾಚೀನ

ಇಜಿಪ್ತ್ ದೇಶದಲ್ಲಿ, ಸುಮಾರು ಐದುಸಾವಿರ ವರುಷಗಳ ಹಿಂದಿನಿಂದ ಕೆಲವು ಕತೆಗಳು ದೊರೆತಿವೆ. ಜಗತ್ತಿನ ಮೊದಲಕತೆಗಳೆಂಬ ಅಂಥವುಗಳಲ್ಲಿ ಸಣ್ಣಕತೆ ಒಂದೋ ಎರಡೋ. ಅವುಗಳಲ್ಲಿ ಒಂದಾದ 'ಇಬ್ಬರು ಅಣ್ಣ ತಮ್ಮಂದಿರು' (ಅನ್ಪು ಹಾಗೂ ಬಾಟ) ಎಂಬುದು ಸಣ್ಣಕತೆಯ ಸರಣಿಯನ್ನು ಹೋಲುತ್ತದೆ. ಅದೇ ಮೊಟ್ಟಮೊದಲನೆಯ ಸಣ್ಣಕತೆಯೆಂದೂ ಕರೆಯಬಹುದು. ಆದರೆ ಅಲ್ಲಿಯೂ ಸಣ್ಣಕತೆ ಹೀಗೆಂದು ತಿಳಿದ ಬರೆವಣಿಗೆ ಇಲ್ಲ. ಬಾಯಬಲ್ ವಾಙ್ಮಯದಲ್ಲಿ, ತೀರ ಹಳೆಯದೆಂದು ದೊರೆಯುವ ರುಥ್‌ಸ್ತ್ರೀಯ ಕತೆ (ದಿ ಬುಕ್ ಆಫ್ ರುಥ್) ಜೀವಾಳದಲ್ಲಿ ಸಣ್ಣ ಕತೆಯೆಂದು ಬಣ್ಣಿಸುತ್ತಾರೆ, 'ದುಂದುಗಾರ ಮಗ'ನ ದೃಷ್ಟಾಂತ ಕತೆಯು ಸ್ಪಷ್ಟವಾಗಿ ಆ ಜಾತಿಯದಿದೆ. ಸಂಸ್ಕೃತ ಸಾಹಿತ್ಯದಲ್ಲಿ ಕಥೆಗಳು ಬೇಕಾದಷ್ಟು ಇದ್ದರೂ ಸಣ್ಣಕತೆ ಕಡಿಮೆಯೆ. ಋಗ್ವೇದದಲ್ಲಿ ಇರುವ ಊರ್ವಶೀಪುರೂರವರ ಸಂವಾದದಿಂದ ಸೂಚಿತವಾಗುವ ಪ್ರೀತಿ ಕಥೆಯು ಸಣ್ಣಕತೆಯ ಅಂಶಗಳಿಂದ ಕೂಡಿದೆ. ಆದರೆ ಇನ್ನುಳಿದ ಕಥೆಗಳೆಲ್ಲ ಹೆಚ್ಚಾಗಿ ಸ್ಪಷ್ಟನೀತಿಗಾಗಿ ಬರೆದುವು. ಪುರಾಣ ಪಂಚತಂತ್ರಗಳು ಇದಕ್ಕೆ ಉದಾಹರಣೆ. ಕನ್ನಡವಂತೂ ಕತೆಗಾಗಿ ಸಂಸ್ಕೃತದ ನೆರಳಾಗಿತ್ತು, ಆದರಲ್ಲಿಯೂ ಅದೇ ರೀತಿ. ಆದರೂ ಕನಕನ ರಾಮಧಾನ್ಯ ಚರಿತೆ, ಹಳ್ಳಿಯ ಹಾಡುಗಳಲ್ಲಿ ದೊರೆತ ಜೀಸನಾಡ ಕೋಣವೇ ಗೌಡನ ಚರಿತೆ, ಇವು ಪದ್ಯವಾದರೂ ಸಣ್ಣಕತೆಯ ಮಾದರಿಗಳೆನ್ನಲು ಅಡ್ಡಿಯಿಲ್ಲ. ಒಟ್ಟಾರೆ, ಮೂರು ತೆರನಾಗಿ ಕತೆಗಳನ್ನು ಬರೆಯಬಹುದು: ಕತೆಗಾಗಿ, ನೀತಿಗಾಗಿ, ಕಲೆಗಾಗಿ. ಪ್ರತಿಯೊಂದು ನುಡಿಯ ಹಳೆಯಸಾಹಿತ್ಯದಲ್ಲಿ ಬಹುಸಂಖ್ಯ ಕಥೆಗಳು ಮೊದಲಿನೆರಡು ತೆರನಾಗಿ ಬರೆದುವು. ಕಲೆಗಾಗಿ ಬರೆದುವು ಅಪರೂಪ. ಅವೇ ನಾವು ಬೇರ್ಪಡಿಸಿ ಹೇಳುತ್ತಿರುವ ಸಣ್ಣಕತೆ. ಅವೆಷ್ಟು ದೊರೆಯುತ್ತವೆಯೋ ಅಲ್ಲಿ ಕಲೆಯಿದೆ, ಶಾಸ್ತ್ರದ ಅರಿವಿಲ್ಲ. ಮಿಂಚು ತನಗೆ ತಿಳಿಯದೆ, ಬಂಗಾರ ಬಳಿಯಾಗಿ ಮಿಂಚಿ ಹೋದಂತೆ ಅವುಗಳ ಕಲೆ. ಹೀಗಾಗಿ ಸಣ್ಣಕತೆಯೆಂದರೇನೆಂಬ ಕಲಾ ರಹಸ್ಯವನ್ನರಿತು ಬರೆದ ಬಗೆಯು ಹೊಸದೇ, ಈ ೧–೨ ಶತಮಾನಗಳಲ್ಲಿ ಅದು ಮೈದೋರಿದೆ. ಆದುದರಿಂದ ಕನ್ನಡದಲ್ಲಿ ಇಂದು ನಡೆದಿರುವ

ಸಣ್ಣಕತೆಯ ಬರೆವಣಿಗೆಯು ಇಂದಿನದೇ. ಅದಕ್ಕೆ ದೃಢವಾದ ಪ್ರಾಚೀನ ಪರಂಪರೆಯು ಇಲ್ಲ. ಅಲ್ಲದೆ, ಸಣ್ಣ ಕವಿತೆ, ಒಂದಂಕದ ನಾಟಕ, ಹರಟೆಗಳಂತೆ ಅದು ಪಡುವಣಿಂದ ಹಾರಿ ಬಂದು ಬಿತ್ತು. ೧೯ ನೆಯ ಶತಮಾನದಲ್ಲಿ ಅಮೇರಿಕೆಯಲ್ಲಿ ಅದು ಮೊದಲಾಯ್ತು. ಎಡ್ಗರ್ ಎಲನ್ ಪೋ ಎಂಬ ಸಾಹಿತಿಯು ಶಾರ್ಟ್‌ಸ್ಟೋರಿ ಎಂದು ಹೆಸರಿಟ್ಟು, ಅದರ ಜೀವಾಳ ತಿಳಿದು ಸಣ್ಣಕತೆ ಬರೆದ ಮೊದಲಿಗನು. ಹಾಥಾರ್ನ ಎಂಬವನ 'ಟೇಲ್ಸ' ಎಂಬ ಕತೆಗಳ ವಿಮರ್ಶೆ ಬರೆಯುವಾಗ, ಆ ಪೋ ದೊರೆಯು ಸಣ್ಣಕತೆಯ ಆತ್ಮವು ಸಮಗ್ರತೆ, ಏಕಾಗ್ರತೆ ಎಂದುಸುರಿ, ಅದಕ್ಕೆ ಶಾಸ್ತ್ರಸಂಸ್ಕಾರ ಕೊಟ್ಟನು. ಸಂಸ್ಕಾರ ಹೊಂದಿದ ಅದಕ್ಕೆ ಎಲ್ಲ ದಿಕ್ಕುಗಳಲ್ಲಿ **ಪೋ** (ಹೋಗು) ಎಂದು ಆತನು ಹೇಳಿದ್ದರಿಂದಲೋ ಏನೊ, ಇಂಗ್ಲಂಡ್ ಮಾರ್ಗವಾಗಿ ಸಣ್ಣಕತೆ ಅಮೇರಿಕೆಯ ಇನ್ನೊಂದು ತುದಿಯಾದ ಹಿಂದುಸ್ಥಾನಕ್ಕೆ ಬಂದಿತು. ಕ್ರಮವಾಗಿ ಕನ್ನಡನಾಡಿಗೂ ಬಂದಿದೆ. ಆದುದರಿಂದ ಸಣ್ಣಕತೆಯ ಶಾಸ್ತ್ರಪರಂಪರೆಯು ಪರದೇಶದ್ದಾಗಿದೆ ಎಂದು ಲಕ್ಷ್ಯದಲ್ಲಿಟ್ಟು, ಅದರ ತಿರುಳನ್ನು ಇಂಗ್ಲಿಶ್ ವಿಮರ್ಶಕರ ಮುಖವಾಗಿ ನಾವೀಗ ತಿಳಿದುಕೊಳ್ಳುವುದು ಅಗತ್ಯ. ಪೋ ಹೇಳುವುದೆಂದರೆ 'ಒಂದೇ ಏಟಿಗೆ ಕುಳಿತು ಮುಗಿಸಲಾರದ ಕಾದಂಬರಿಯಲ್ಲಿ ಸಮಗ್ರತೆ (Totality) ಯ ಮಿಗಿಲಾದ ಬಲ್ಮೆಯು ಉಳಿಯಲಾರದು' ಎಂದರೆ ಇಡಿಯ ಕತೆಯಿಂದ ವಿಶಿಷ್ಟವಾದ ಬಗೆಯಲ್ಲಿ ಆಗಬೇಕೆಂದು ಬಯಸಿದ ಪರಿಣಾಮವು ಆಗುವುದಿಲ್ಲ. 'ಆದೇ ಕುಶಲಕಲಾವಿದನು ಸಣ್ಣಕತೆಯೊಂದನ್ನು ರಚಿಸಿದನೆಂದರೆ, ತನ್ನ ಸಂಗತಿಗಳನ್ನು ಮೊದಲು ಕಲ್ಪಿಸಿ, ಅವಕ್ಕೆ ಸರಿಗೊಳ್ಳುವ ಹಾಗೆ ತನ್ನ ವಿಚಾರಗಳನ್ನು ಅವನು ತಿರುವುವುದಿಲ್ಲ. ಮೊದಲು ಆತನು ಓದುಗನ ಮನಸ್ಸಿನ ಮೇಲೆ ಉಂಟಾಗಬೇಕಾದ **ನಿದಿಃಷ್ಟವಾದ ಏಕಮೇವ ಪರಿಣಾಮ**ವನ್ನು ಕಲ್ಪಿಸಿ, ಅದನ್ನುಂಟುಮಾಡಲು ಬೇಕಾದ ಸಂಗತಿಗಳನ್ನು ಹುಟ್ಟಿಸಿ, ಅದನ್ನು ಕುರಿತೇ ಅವನ್ನು ಹೆಣೆಯುವನು. ಅವನ ಆರಂಭವಾಕ್ಯವೇ ಆ ಪರಿಣಾಮಸಾಧನಕ್ಕೆ ಒಲೆಯದಿದ್ದರೆ ಮೊದಲಡಿಯಲ್ಲಿಯೆ ಅವನು ಎಡವಿದಂತಾಗುವುದು. ಇಡೀ ರಚನೆಯಲ್ಲಿ ಪೂರ್ವಸಂಕಲ್ಪಿತವಾದ ಉದ್ದೇಶಕ್ಕೆ ನೆರವಾಗದ ಒಂದು ಶಬ್ದವೂ ಇರ

ಲಾಗದು. ಇಂಥ ಉಪಾಯಗಳಿಂದ, ಇಂಥ ಜಾಣ್ಮೆ ಜತನಗಳಿಂದ, ಕೊನೆಗೊಂದು ಚಿತ್ರಬರೆಯಲ್ಪಟ್ಟು, ಅದನ್ನು ನಿರುಕಿಸುವ ರಸಿಕನಲ್ಲಿ ಗುರುತುಳ್ಳ ಕಲೆಯ ಪೂರ್ಣತೃಪ್ತಿಯು ಊರ್ಮಿಯೇಳುತ್ತದೆ. ಕತೆಯ ಮೂಲಕಲ್ಪನೆಯು ನಿರ್ದುಷ್ಟವಾಗಿ, ನಿರ್ಬಾಧವಾಗಿ ಕಣ್ಣೆದಿರಲ್ಲಿ ನಿಲ್ಲಿಸಲ್ಪಡುತ್ತದೆ. ಕಾದಂಬರಿಯಿಂದ ಇದಾಗದ ಕೆಲಸ. ಅಕಾರಣ ಸಂಕ್ಷೇಪವು ಕವಿತೆಯಲ್ಲಿಯ ಹಾಗೆ ದೋಷಾರ್ಹವಾದುದು; ಆದರೆ ಅಕಾರಣ ದೀರ್ಘತೆಯು ಅದಕ್ಕೂ ಹೆಚ್ಚು ತಪ್ಪು' ಪೋನ ಸಣ್ಣಕತೆಗಳು ಜನಾದರಕ್ಕೆ ಪಾತ್ರವಾಗುತ್ತನಡೆದರೂ ೧೯ನೆಯ ಶತಮಾನದ ಬಹು ಮುಂದಿನವರೆಗೆ ಮೇಲಣ ಅವನ ತತ್ತ್ವವು ವಿಮರ್ಶೆಯ ರಾಜ್ಯದಲ್ಲಿ ನೆಲೆಗೊಳ್ಳಲಿಲ್ಲ. ಪ್ರೊಫೆಸರ್ ಮ್ಯಾಥ್ಯೂಜಾ ಎಂಬವರು ಅದನ್ನು ಸ್ಫುಟಗೊಳಿಸಿ ಮುಂದೂಡಿದರು. 'ಸಣ್ಣಕತೆಯು ಸಣ್ಣದಾದ ಬರೀ ಕತೆಗಿಂತ ಬೇರೆಯಾದುದು. ಮೂಲವಾದ ಸಂವೇದನೈಕ್ಯ ಇಲ್ಲವೆ ಪರಿಣಾಮದ ಏಕತೆ (Unity of impression) ಎಂಬ ವಿಷಯದಲ್ಲಿ ಸಣ್ಣಕತೆಗೂ ಕಾದಂಬರಿಗೂ ಬಿಡುತ್ತದೆ. ಕಾದಂಬರಿಯಲ್ಲಿ ಇಲ್ಲದ ಆ ಐಕ್ಯವು ಸಣ್ಣಕತೆಯಲ್ಲಿ ಇರುತ್ತದೆ. ಎಷ್ಟೋಸಲ, ಫ್ರೆಂಚ್ ಪ್ರಾಚೀನ ನಾಟಕದ ಮೂರು ಸುಳ್ಳು ಐಕ್ಯಗಳನ್ನು ಸಣ್ಣಕತೆಯು ಪಾಲಿಸುತ್ತದೆ—ಒಂದು ಕ್ರಿಯೆ, ಒಂದು ಸ್ಥಳ, ಒಂದು ದಿನ. ಸಣ್ಣಕತೆಯು ಒಂದೇ ಪಾತ್ರ, ಒಂದೇ ಸಂಗತಿ, ಒಂದೇ ಭಾವ ಇಲ್ಲವೆ ಒಂದೇ ಸನ್ನಿವೇಶದಿಂದ ಉಂಟಾದ ಭಾವಮಾಲಿಕೆಯನ್ನು ಕುರಿತು ಬರೆಯಲಾಗುತ್ತದೆ.' ಈ ಮೊದಲಾದ ವಿಚಾರಗಳನ್ನು ಅನುಗೊಳಿಸುವಂತೆ ಹ್ಯಾಮಿಲ್ಟನ್ ಎಂಬ ವಿಮರ್ಶಕರು ಕೆಳಗಿರುವ ಹಾಗೆ ಸಣ್ಣಕತೆಯ ವ್ಯಾಖ್ಯೆಯೊಂದನ್ನು ರಚಿಸಿರುವರು. **"ಒತ್ತಿ ಹೇಳುವಷ್ಟು ಕೇಳುವದಕ್ಕೆ ತಪ್ಪದಂತೆ, ಸಾಧ್ಯವಿದ್ದಷ್ಟು ಸಾಧನ ಮಿತಿಯಿಂದ ಒಂದೆ ಒಂದೆಂಬ ಕಥಾಪರಿಣಾಮವನ್ನು ಉಂಟುಮಾಡುವುದೇ ಸಣ್ಣಕತೆಯ ಉದ್ದೇಶ"** ಈ ವ್ಯಾಖ್ಯೆಯನ್ನು ಮುಂದಿಟ್ಟುಕೊಂಡು, ಸಣ್ಣಕತೆಯ ಕಲಾಜೀವವನ್ನು ತಿಳಿದುಕೊಳ್ಳುವುದು ಅವಶ್ಯ. ಮೊದಲು, ಒಂದೆ ಒಂದೆಂಬ ಕಥಾಪರಿಣಾಮವೆಂದರೇನು? ಕಥೆಯ ಓದಿನಿಂದ ಆಗುವ ಪರಿಣಾಮವು ಒಂದೆ ಆಗ

ಬೇಕು; ಎಂದರೆ ಕಥೆಯು ಕಥೆಗಾಗಿ, ಉದ್ದಕ್ಕಾಗಿ ಬರೆದುದಲ್ಲ; ಒಂದು ಗೊತ್ತುಪಡಿಸಿದ ಬಗೆಯಲ್ಲಿ ಹಿಡಿತ, ಓರಣಗಳಿಂದ ಬರೆದುದಾಗಿದೆ; ಅದಕ್ಕೊಂದು ಸ್ಪಷ್ಟವಾದ ಕಲೆಯು ಪಡಿಯಚ್ಚಿದೆ; ಅದು ಕೊನೆವರೆಗೆ ಯಶಸ್ವಿಯಾಗಿ ತೋರಿದೆ—ಎಂಬ ಪರಿಣಾಮವು ಓದುಗನ ಚಿತ್ತದಲ್ಲಿ ಮೂಡಬೇಕು. ಇದೇ ಸಮಗ್ರತೆ, ಸಂವೇದನೈಕ್ಯ. ಆ ವಿಶಿಷ್ಟವಾದ ಕಲಾರೂಪವು ಒಮ್ಮೆಯೆ ಸಮಗ್ರವಾಗಿ ಏಕಸಂವೇದನೆಯನ್ನುಂಟು ಮಾಡಿ 'ಇದು ಕಲೆ!' ಎನಿಸುವುದು. ನಮ್ಮ ಪ್ರಾಚೀನ ಕಥೆಗಳೂ ಒಂದೇ ಒಂದು ಪರಿಣಾಮಕ್ಕೆ ಹಾತೊರೆಯುತ್ತಿದ್ದುವು; ಆದರೆ ಅದು ಸ್ಪಷ್ಟನೀತಿಯ ಪರಿಣಾಮ. ಇಂದಿನ ಸಣ್ಣಕತೆಗಳದು ವ್ಯಂಗ್ಯವಾದ ಕಲಾಪರಿಣಾಮ. ಈ ಕಲಾಪರಿಣಾಮಕ್ಕೆ ಮೊದಲು ಅದನ್ನುಂಟು ಮಾಡಬೇಕೆಂಬ ಕಲಾಹೇತು ಬೇಕು; ಹಾಗು ಅಲ್ಲಿಯೂ ಆ ಐಕ್ಯವಿರಲೇ ಬೇಕು. ಕತೆಯೇನೇ ಇರಲಿ, ಒಂದೇ ಕಲಾಹೇತುವಿನಿಂದ ಒಂದೆ ಕಲಾರೂಪ ಹುಟ್ಟಿ, ಒಂದೆ ಕಲಾಫಲ ದೊರೆಯಬೇಕು. ಒಂದನ್ನು ಬಗೆದು ಬೇರೊಂದ ಪಡೆದು, ಇನ್ನೊಂದ ಎನಿಸಗೊಡಬಾರದು. ಹಾಗಾದರೆ ಆ ಕಲಾಹೇತು ಹೇಗಿರುತ್ತದೆ? ಯಾವುದೊಂದು ಕತೆಯ ಮೂಲ ಉಗಮವದು, ಸಹಜಸ್ಫೂರ್ತಿಯ ಮತಿಯಿಂದ ಹರಿವ ಮೊದಲ ಝರಿ. ಅದರಲ್ಲಿ ಹೊಸತನದ ಹೊಳಪಿರುತ್ತದೆ, ಮುಂದೆ ತುಂಬುದೊರೆಯಾಗಿ, ಕಡಲ ಕೂಡುವ ನೆಚ್ಚಿಗೆಯಿರುತ್ತದೆ. ಸಾಮಾನ್ಯವಾಗಿ ಅದು ಪ್ರತ್ಯಕ್ಷಜೀವನವನ್ನು ನೋಡಿ, ನಿರ್ಹೇತುಕವಾಗಿ ಮಧ್ಯಸ್ಥನಂತೆ ವಿಮರ್ಶಿಸುವಾಗ ಬುಗ್ಗೆಯಾಗೇಳುತ್ತದೆ, ಮುಂದೆ ಹೊಳೆಯಾಗಿ ಹರಿಯುತ್ತದೆ. ಅದಿಲ್ಲದೆ ಯಾವ ಸಣ್ಣಕತೆಗಾರನೂ ಬಾಳನು. ಅದು ಜೀವನದ ಚರಿತ್ರಸಾಗರದಲ್ಲಿಯ ಒಂದು ಅಲೆಯನ್ನು ಹೇಗೆ ಚಿತ್ರಿಸಿದರೆ ಸೊಗಸಾದೀತೆಂಬ ರೂಪದೊಡನೆ ಜನಿಸಿ ಕಲಾಹೇತುವೆನಿಸಿಕೊಳ್ಳುತ್ತದೆ. ಇಲ್ಲವೆ, ಜೀವನದ ಆದರ್ಶದಂತರಿಕ್ಷದಲ್ಲಿ ಹೊಳೆವ ಚಿಕ್ಕೆಯೊಂದನ್ನು ಹೇಗೆ ಭೂಮಿಯ ಬಾಳ್ವೆಯ ಕೊಳದಲ್ಲಿ ಬೆಳಗಿಸಿದರೆ ಲೇಸಾದೀತೆಂಬ ರೂಪದೊಡನೆಯೂ ಅದೇ ಕಲಾಹೇತುವಾಗಬಹುದು. ಪ್ರತ್ಯೇಕವಾಗಿ ಹೇಳುವುದಾದರೆ, ಕತೆಯ ಮೂರು ಅಂಗಗಳಾದ ಸಂಗತಿ, (plot) ಸ್ವಭಾವ, (character)

ಪರಿಸ್ಥಿತಿ (setting) ಇವುಗಳಲ್ಲಿ ಯಾವುದನ್ನು ಹೆಚ್ಚು ಪ್ರಮುಖವಾಗಿ ಕತೆಯಲ್ಲಿ ತೋರಬೇಕೆನ್ನುವುದೊ ಆ ಪ್ರಕಾರವಾಗಿ, ವಿಶಿಷ್ಟವಾದ ಮೂಲಹೇತುವಾಗಿ ಅದು ನಿಲ್ಲುತ್ತದೆ. ಸಂಗತಿಯ ಪ್ರಾಮುಖ್ಯವೆಂದರೆ ಸ್ವಭಾವಾದಿಗಳಿಗೆ ಅಷ್ಟು ಲಕ್ಷ್ಯಕೊಡದೆ, ಕತೆಯ ಇತಿವೃತ್ತವನ್ನು ಸೋಜಿಗದ ಸಮೂಹವಾಗುವಂತೆ ರಚಿಸುವ ವ್ಯೂಹ. ಸ್ವಭಾವವು ಪ್ರಮುಖವಾದಲ್ಲಿ ಒಂದೆರಡು ವ್ಯಕ್ತಿಗಳ ವಿಶಿಷ್ಟಸ್ವಭಾವದ ಸ-ವಿವರವಾದ ಸೂಕ್ಷ್ಮಚಿತ್ರವು ಮೂಲೋದ್ದೇಶವಾಗುತ್ತದೆ. ಪರಿಸ್ಥಿತಿಯು ಮುಖ್ಯವಾಗಬೇಕಾದರೆ ಒಂದು ಕಾಲ, ದೇಶ ಮೊದಲಾದವುಗಳ ವಾತಾವರಣವು ಪ್ರತ್ಯಕ್ಷವಾಗುವಂತೆ ಮಾಡುವುದೇ ಮೂಲಕಲ್ಪನೆಯಾಗುವುದು. ಇದರಿಂದ ಸಣ್ಣಕತೆಗೊಂದು ಗುರಿ, ಸಿರಿ ಬೇಕೆಂದು ಸಿದ್ಧಗೊಳಿಸಿದುದಾಯ್ತು. ಆದರೆ ಅದಕ್ಕೆ ಬೇಕಾದ ಸಾಧನದಲ್ಲಿ ಸಾಧ್ಯವಾದಷ್ಟು ಮಿತಿಯಿರಬೇಕೆಂದೂ ಮಿತಿಯೂ ಕೂಡ ಅತಿಯಾಗಬಾರದೆಂದೂ ಕೊಡುವಷ್ಟು ಒತ್ತುಕೊಟ್ಟು, ಜೊಳ್ಳಾಗದೆ ಬರೆಯಬೇಕೆಂದೂ ಹಿಂದೆ ಹೇಳಿದ ವ್ಯಾಖ್ಯೆಯಲ್ಲಿ ಬಂದಿದೆ. ಅದರರ್ಥವೆಂದರೆ, ಸಣ್ಣಕತೆಯು ತನ್ನ ಸಾಧ್ಯವಾದ ಐಕ್ಯಕ್ಕೆ, ಸಾಧನವಾದ ಸಂಕ್ಷೇಪವನ್ನು ಬಹಳ ತೂಕದಿಂದ ಹೆಚ್ಚುಕಡಿಮೆಯಾಗದೆ ಬಳಸಬೇಕು. ಕಿರಿದರೊಳು ಪಿರಿದರ್ಥದ ಮಾತುಗಳು ಹೆಣೆದು, ಕೊನೆಯಲ್ಲಿ ಆಗಬೇಕಾದ ಪರಿಣಾಮದಲ್ಲಿ ಸ್ವಲ್ಪವೂ ಕುಂದೆನಿಸದಂತೆ ಬರೆವಣಿಗೆ ಬೇಕು. ಅಂತೇ ಸಂಕ್ಷೇಪಸಾಧನವು ಐಕ್ಯಸಾಧ್ಯದೊಡನೆ ಸಣ್ಣಕತೆಯ ಸರ್ವಸ್ವ ಎಂದು ಸಾರಬಹುದು. ಇಲ್ಲದಿದ್ದರೆ ಬರೀ ಐಕ್ಯವು ತನ್ನಷ್ಟಕ್ಕೇ ಎಲ್ಲಕಲೆಯ ಲಕ್ಷಣ, ಅದಕ್ಕೇ ನಮ್ಮ ಲಾಕ್ಷಣಿಕರು ರಸವೆಂದರು; ಅದನ್ನರಿಯುವುದು ಎಲ್ಲಬಗೆಯ ಕಲಾಶಾಲೆಗಳಿಗೂ ಅತ್ಯವಶ್ಯವಿರಲು ಸಣ್ಣಕತೆಯ ಮಟ್ಟಿಗೆ ಅದು ಅನ್ವಯಿಸುವುದರಲ್ಲಿ ಬೇರೆ ಅರ್ಥವಿದೆ. ಇಲ್ಲಿ ಸಣ್ಣಕತೆಯೊಡನೆ ಕಾದಂಬರಿಯನ್ನು ತೂಗುವುದು ಪ್ರಸ್ತುತ. ಕೆಲವರು ಸಣ್ಣಕತೆಯೇನು ಸ್ವತಂತ್ರಕಲಾಜಾತಿಯಲ್ಲ, ಕಾದಂಬರಿಯ ಮರಿಯೇ ಸಣ್ಣಕತೆಯೆಂದು ಆಡುವುದುಂಟು. ಕಾದಂಬರಿಯಲ್ಲಿ ವಿಸ್ತೃತವಾದ ಕತೆಯಿದ್ದರೆ ಅದರ ತಾತ್ಪರ್ಯರೂಪವಾದುದು ಇಲ್ಲವೆ ಅದರಲ್ಲಿಯ ಒಂದು ಚಿಕ್ಕ ಅಧ್ಯಾಯವು ಸಣ್ಣಕತೆಯಾಗಲು

ಅಡ್ಡಿಯಿಲ್ಲವೆಂದು ತಿಳಿಯುವುದುಂಟು ಆದರೆ ಇದ. ತೀರ ತಪ್ಪಾದ ವಿಚಾರಸರಣಿಯೆಂದು ತೋರಿಸುವುದೇ ಇಂದಿನ ಲಘುಕಥಾವಿಮರ್ಶಕರ ಕಾರ್ಯವಾಗಿದೆ. ಹಾಗೆ ತೋರಿಸುವಾಗಲೇ ಅವರು ಸಣ್ಣಕತೆಯನ್ನು ಕಾದಂಬರಿಯಿಂದ ಬೇರ್ಪಡಿಸಲೆಂದು ಆ ಐಕ್ಯದ ಮಾತನ್ನೆತ್ತುತ್ತಾರೆ. ಕಾದಂಬರಿಯಿಂದ ಸಾಧಿಸಲಾಗದ ಆ ಸಂವೇದನೈಕ್ಯವನ್ನು ಸಣ್ಣಕತೆಯು ಸಾಧಿಸುತ್ತದೆ; ಸಂಕ್ಷೇಪಸಾಧನದ ಮೂಲಕ ಸಾಧಿಸುತ್ತದೆ. ಅಂತೆಯೇ ಆ ಐಕ್ಯವು ಸಣ್ಣಕತೆಯ ಜೀವಸ್ವರ. ಕಾದಂಬರಿಯಲ್ಲಿ ಆ ಐಕ್ಯವು ಮೂಲಹೇತುರೂಪವಾಗಿ ಇರಬಹುದು. ಆದರೆ ಅದರ ಭವ್ಯವಿಸ್ತಾರದ ಮೂಲಕ ಅದು ಪರಿಣಾಮದಲ್ಲಿ ಸುಸ್ಪಷ್ಟವಾಗಿ ವ್ಯಕ್ತವಾಗುವುದಿಲ್ಲ. ಒಂದೆ ಚಿತ್ರವನ್ನು ನೋಡಿ ಅಪೇಕ್ಷಿತವಾದ ಒಂದು ಪರಿಣಾಮವಾಗುವಂತೆ, ನೂರಾರು ಚಿತ್ರಗಳನ್ನು ನೋಡಿ ನೂರಾರು ಪರಿಣಾಮಗಳಾಗಬಹುದು. ಒಂದಾಗುವುದೆಂತು? ವ್ಯಾಸಂಗವಿಮರ್ಶೆಗಳಿಂದ ಆಗಬಹುದು, ಸಹಜಸಂವೇದನೆಯಾಗಿ ಅಲ್ಲ. ಕಾದಂಬರಿಗೂ ಸಣ್ಣಕತೆಗೂ ಹೋಲಿಕೆಯುಂಟು, ಬಹಳವಾಗಿ ಉಂಟು. ಆದರೆ ಅವುಗಳ ನಡುವಿನ ಅಂತರವು ನಮಗೆ ಈಗ ಪ್ರಕೃತವಾದುದು. ಬ್ಯಾರಿಪೇನ್ ಎಂಬ ವಿಮರ್ಶಕನು ಹೇಳುವಂತೆ, ಕಾದಂಬರಿಯೆಂದರೆ ಪೂರ್ಣ ಸಂತುಷ್ಟಿ; ಸಣ್ಣಕತೆಯೆಂದರೆ ಪ್ರಚೋದನ, ಅ-ಸಮಾಧಾನ ಕಾದಂಬರಿಕಾರನು ವಾಚಕನಿಗೆ ಹೆಚ್ಚು ಕೊಟ್ಟು, ಅವನಿಂದ ಕಡಿಮೆ ಬೇಡುವನು, ಅದೇ ಸಣ್ಣಕತೆಗಾರನು ಕಡಿಮೆ ಕೊಟ್ಟು, ಹೆಚ್ಚು ಬೇಡುತ್ತಾನೆ. ಆಲ್‌ಬ್ರಾಯಿಟನು ಹೇಳುವಂತೆ, ಕಾದಂಬರಿ, ಸಣ್ಣಕತೆಗಳ ನಡುವಿನ ಒಡೆದುಕಾಣುವ ಭೇದವೆಂದರೆ, ಸಣ್ಣಕತೆ ಬರೆವವನಿಗೆ ಆಯ್ಕೆ ಅಥವಾ ಸೂಚ್ಯವಾದ ಸೂತ್ರಮಯತೆ (Suggestive Omission and Compression) ಎಂಬುದು ಮಹತ್ವದ ಪ್ರಶ್ನೆಯಾಗಿರುತ್ತದೆ. ಅಂತೇ ಐಕ್ಯವು ಅವನಿಗೆ ದೊರೆವುದು. ಇದಲ್ಲದೆ ಕಾದಂಬರಿಯಲ್ಲಿ ಒಂದು ಮೂಲಭೂತವಾದ ಕಲ್ಪನೆ, ಹೇತು ಇರದಿದ್ದರೂ ನಡೆಯಬಹುದಾದರೆ, ಸಣ್ಣಕತೆಯಲ್ಲಿ ಅದು ಇರಲೇಬೇಕು. ಯಾಕೆಂದರೆ, ಸಣ್ಣಕತೆಯು ಕಾಲಕ್ರಮದಿಂದ ಇಲ್ಲವೆ ಯುಕ್ತಿಕ್ರಮದಿಂದ ಕೆಲವು ವೃತ್ತಾಂತಮಾಲಿಕೆಗಳನ್ನು ಹೇಳಲಿಕ್ಕಾಗಿ ಇರದೆ, ಪೂರ್ವ

ಕಲ್ಪಿತವಾದ ಒಂದು ಕಲ್ಪನೆಯನ್ನು ಮೂರ್ತಗೊಳಿಸುವುದಕ್ಕಾಗಿ ಜೀವನದ ಒಂದು ತುಣುಕನ್ನು ಚಿತ್ರಿಸಬೇಕಾಗುತ್ತದೆ; ಎಂದರೆ ಸ್ವಲ್ಪದರಲ್ಲಿ ಸಣ್ಣಕತೆಗೆ ಒಂದೇ ಒಂದು ಸ್ಥಿತಿ, ಸಂನಿವೇಶ, ನಿಲುವು (Situation) ಬೇಕು. ಕಾದಂಬರಿಯು ಇಂತಹ ಅನೇಕ ಸಂನಿವೇಶಗಳ ಮೊಟ್ಟೆ ಕಟ್ಟಿ, ಕೈಗೆ ಸಿಲುಕಲಾರದ ಐಕ್ಯವನ್ನು ರೂಪಗೊಳಿಸಲೆಳಸುತ್ತದೆ ಇನ್ನು, ಈ ಲಕ್ಷಣಭೇದದ ಮೂಲಕ ಎರಡೂ ಕಲಾರೂಪಗಳ ಭಕ್ತರಲ್ಲಿ ಬೇರೆ ಬೇರೆ ಗುಣಗಳು ಬೇಕೆಂದು ಸಾಧಿಸುವುದುಂಟು. ಕಾದಂಬರಿಯನ್ನು ಬರೆಯಲು ಬೇಕಾಗುವ ವಿವಿಧ ಲೋಕಾನುಭವ, ಅದರಿಂದ ಉಂಟಾದ ತಾಳ್ಮೆ, ತಿಳಿವಳಿಕೆ ಇವು ಇಲ್ಲದಾತನು ಸಣ್ಣಕತೆಗಳನ್ನು ಮಾತ್ರ ಬರೆಯಬಲ್ಲನಂತೆ. ಅಂತೇ ತರುಣರು ಕತೆಗಾರರಾಗಲು ಯೋಗ್ಯರೆಂದೂ ವೃದ್ಧರು ಕಾದಂಬರೀಕಾರರಾಗಲು ತಕ್ಕವರೆಂದೂ ಎರಡೂ ಬದವರು ಕ್ವಚಿತ್ತೆಂದೂ ಪ್ರತಿಪಾದಿಸುವ ಪ್ರವೃತ್ತಿಯು ಕೆಲವರಲ್ಲಿ ಉಂಟು ಆದರಿಂದ ಎರಡೂ ಪ್ರಕಾರಗಳಿಗೆ ಬೇಕಾಗುವ ಬೇರಬೇರೆ ಸಾಧನಸಂಪತ್ತಿಯನ್ನು ಮಾತ್ರ ಬಣ್ಣಿಸಿದಂತಾಗುವುದೆಂದು ನಾವು ತಿಳಿಯುತ್ತೇವೆ. ಯಾಕೆಂದರೆ ಕಲಾದೇವತೆ ಒಲಿದು ಮೈದುಂಬಿದರೆ ಯಾರಲ್ಲಿ ಏನಾಗಲಿಕ್ಕಿಲ್ಲ? ಈ ಮುಂದೆ, ಸಣ್ಣಕತೆಗೂ ಭಾವಗೀತೆಗೂ ಇರುವ ಸಂಬಂಧವನ್ನು ಇಲ್ಲಿ ಸ್ವಲ್ಪ ತಿಳಿದುಕೊಳ್ಳಬಹುದು. ಭಾವಗೀತೆಯಲ್ಲಿರುವಂತೆ ಸಣ್ಣಕತೆಯಲ್ಲಿ ಒಂದು ಕಲಾಹೇತುವಿನ ಸ್ಫೂರ್ತಿ ಇಲ್ಲವೆ ರಸಪ್ರೇರಣೆಯಿದ್ದು, ವ್ಯಕ್ತಿಯ ಸ್ವಗತದ ಇಲ್ಲವೆ ಸ್ವ–ಸಂವೇದನದ ರೀತಿಯಿರುತ್ತದೆ. ಭಾವಗೀತೆ ಆತ್ಮೀಯವಾದಂತೆ ಸಣ್ಣಕತೆಯೂ ಆತ್ಮೀಯವೇ. ಭಾವಗೀತೆಯು ತನ್ನ ಐಕ್ಯವನ್ನು ಪದ್ಯದಿಂದ ಇಲ್ಲವೆ ನಾದದಿಂದ ಸಾಧಿಸಿದರೆ, ಸಣ್ಣಕತೆಯು ಗದ್ಯದಿಂದ ಸಾಧಿಸುತ್ತದೆ. ಅಂತೇ ದರ್ಶನದಲ್ಲಿ ಅವೆರಡೂ ಒಂದು. ರೂಪದಲ್ಲಿ ಮುಂದೆ ಅವು ಅಗಲುತ್ತವೆ. ಭಾವಗೀತೆಯಲ್ಲಿ ಕಥಾನಕವಿರುವುದು ವಿರಳ. ಸಣ್ಣಕತೆಯಲ್ಲಿ ಅದು ಜೀವಾಳ; ಕಥಾನಕವಿಲ್ಲದ ಕತೆಯೆಲ್ಲಿ? ಇದರಂತೆ ಒಂದಂಕದ ನಾಟಕ, ಹರಟೆ ಇವುಗಳ ಕೂಡ ಸಣ್ಣಕತೆಯು ಹತ್ತುಗಡೆಯಿರುವುದೆಲ್ಲ ಆತ್ಮೀಯತೆಯಲ್ಲಿ, ವೈಯಕ್ತಿಕವಾಗಿ ಎನಿಸಿದ್ದಕ್ಕೆ ಸಮಗ್ರ ರೂಪ ಕೊಡಬೇಕೆನ್ನುವ ಹಾರೈಕೆಯಲ್ಲಿ ಎಂದು ತಿಳಿದು ನಡೆಯಬೇಕು.

ಈ ಪರಿಯಲ್ಲಿ ತನ್ನದೊಂದು ಕಲಾವಿಶೇಷವಿರುವ ಈ ಸಣ್ಣ ಕತೆಯು, ನಮ್ಮ ಕನ್ನಡನುಡಿಯಲ್ಲಿ ಈ ವರೆಗೆ ಹೇಗೆ ಬೆಳೆದು ಬಂದಿದೆ ಯೆಂಬುದನ್ನು ನಾವೀಗ ಅರೈವುದು ಯಥೋಚಿತವೇ. ಆದರೆ ಸಂಪೂರ್ಣ ವಿಸ್ತರವಾದ ಚರಿತ್ರವನ್ನಾಗಲಿ, ವಿಮರ್ಶೆಯನ್ನಾಗಲಿ ಕೈಕೊಳ್ಳದೆ ವಿಮಾನ–ದೃಷ್ಟಿಯಿಂದ ಕತೆಯ ಜಗತ್ತನ್ನು ನೋಡಿ, ಕೆಲವು ಅಂಶಗಳನ್ನು ಒತ್ತರದಿಂದ ಇಡುವೆನು. ಸಣ್ಣಕತೆಯ ಪ್ರಾರಂಭವು ನಮ್ಮಲ್ಲಿ ಇಪ್ಪತ್ತು ವರುಷಗಳ ಈಚೆಯದೇ. ಆ ಪೂರ್ವದಲ್ಲಿ ಬೀರಬಲ್ಲನ ಇಲ್ಲವೆ ತೆನ್ನಾಲ ರಾಮಕೃಷ್ಣನ ಕಿರುಗತೆಗಳು ದೊರೆಯುತ್ತಿದ್ದವು. ಆದರೆ ಅವು, ವಿನೋದ ವಿಡಂಬನದ ತೀರ ಚಿಕ್ಕ ಕತೆಗಳು; ಸಣ್ಣಕತೆಯ ಜಾತಿಯು ವಾಗಿರಲಿಲ್ಲ. ಅದಲ್ಲದೆ, ನಿಲ್ದಾಣದಲ್ಲಿ ಮಾರಲು ಬರುವ ಅದ್ಭುತ–ಅರಮ್ಯ ಕಥೆಗಳು ಆವಾಗಲೂ ಇದ್ದವೇನೋ! ಅವು ಹೆಸರಿಗೆ ಸಣ್ಣಕತೆ, ಕಲೆಯ ಗಂಧವಿಲ್ಲದ ಹಲವು, ಕಲೆಯ ಕೊಲೆಯಾದ ಕೆಲವು; ಅವು ತಾವು ನಿಲ್ಲುವ ತಾಣವನ್ನು ಅಂದು ಪಡೆದವು; ಇಂದಿಗೂ ಅವುಗಳ ಸಂತತಿ–ನಿಯಮನ ಮಾಡುವ ಮದ್ದಾವುದೂ ದೊರೆಯದಾಗಿದೆ. ಕಲಾಸೃಷ್ಟಿಯ ನಾಯಿ ಕೊಡೆಗಳಾಗಿ, ಅವು ಎಷ್ಟೋ ಹುಟ್ಟಿ ಹೋಗುವುದುಂಟು. ಆದರೆ ಅವು ಅಷ್ಟನ್ನೇ ಮಾಡಿ ಹೋಗುವುದಿಲ್ಲ. ಜನಾಭಿರುಚಿಗೆ ವಿರೂಪ ಕೊಡುತ್ತವೆ, ಸರಳತೆಯ ಹೆಸರಿನಲ್ಲಿ, ತೋರಿಕೆಯ ಚೆಂದದ ಹಾರೈಕೆ ಯನ್ನು ಜನಮನದಲ್ಲಿ ಊರುತ್ತವೆ. ಅಂತೆಯೆ ಇಂದಿನ ಸಣ್ಣಕತೆ ಸರಿ ಯಾದ ಹಾದಿಯಿಂದ ಬೆಳೆದು, ಅಂತಹ ಕೊಳೆಗತೆಗಳನ್ನೆಲ್ಲ ಕಿತ್ತುಹಾಕಿ, ನಾಡಬಾಳ್ವೆಯ ನೆಲದಲ್ಲಿ ಬೇರುಬಿಡಬೇಕಾದ ಹಿರಿಬೆಸನವು ಅವುಗಳ ಮುಂದಿದೆ. ಅದಿನ್ನೂ ಸಾಧ್ಯವಾಗಿಲ್ಲ; ಸಣ್ಣ ಆರಂಭವಾಗಿದೆ. ಅದಂತಿರಲಿ, ನಿಜವಾದ ಕಲಾಗುಣವುಳ್ಳ ಸಣ್ಣಕತೆ, ನಮ್ಮ ನುಡಿಯಲ್ಲಿ ಮೊದಲು ಪತ್ರಿಕೆಗಳಲ್ಲಿ ಮೈದೋರಿತು, ಇಂದಾದರೂ ಬಹುವಾಗಿ ಪತ್ರಿಕೆಗಳ ಲ್ಲಿಯೇ ಕಂಡುಬರುತ್ತಿದೆ. ಅಚ್ಚಾದ ಒಟ್ಟುಗತೆಗಳ ಪುಸ್ತಕಗಳು ಹತ್ತೋ ಹದಿನೈದೋ. ಹೀಗಾಗಲು ಕನ್ನಡಿಗರಲ್ಲಿ ಇನ್ನೂ ಇಮ್ಮಡಿ ಮುಮ್ಮಡಿಯಾಗದ ಓದಿನ ಹಸಿವೇ ಕಾರಣ. ಅದಕ್ಕೂ ಮೂಲದಲ್ಲಿರುವ ಕಾರಣಗಳೇನೇ ಇರಲಿ, ನಮ್ಮ ಜನತೆಯ ಆರ್ಥಿಕದೈನ್ಯಕ್ಕಿಂತ

ವಾಙ್ಮಯದೈನ್ಯವು ನಮ್ಮ ಪ್ರಮತ್ತಿಸಿಸ ಅನೇಕ ಕಾರ್ಯಗಳಿಗೆ ಅಡ್ಡ ಗೋಡೆಯಾಗಿದೆ. ಅದು ಹೋಗಲು ಸಾಹಿತ್ಯಪ್ರಚಾರ ಬೇಕು; ಸಾಹಿತ್ಯ ಪ್ರಚಾರವಾಗಲು ಅದು ಹೋಗಬೇಕು; ಇಂಥದೊಂದು ತಿರುಗಣಿ ಮಡುವಿನಲ್ಲಿ ಜಗತ್ತನ್ನೇ ಪಲ್ಲಟಿಸುವೆನೆಂಬ ಹುರುಪು ಕೂಡ ಹುಳುವಾಗಿ ತಿರುತಿರುಗಿ ತೊತ್ತಳಗೊಂಡಿದೆ.

ಪತ್ರಿಕೆಗಳಲ್ಲಿ ಸಣ್ಣಕತೆಯು ಮೊಳೆಯಿತೆಂದು ನೋಡಿದೆವಷ್ಟೇ. ಅದು ಉತ್ತರಕರ್ಣಾಟಕದಲ್ಲಿ ಕೆರೂರ ವಾಸುದೇವಾಚಾರ್ಯರಿಂದ 'ಸಚಿತ್ರ ಭಾರತ'ದಲ್ಲಿ, ದಕ್ಷಿಣದಲ್ಲಿ ಮಾಸ್ತಿ ವೆಂಕಟೇಶಯ್ಯಂಗಾರರಿಂದ 'ಮಧುರವಾಣಿ'ಯಲ್ಲಿ, ಮೊದಮೊದಲು ಮೊಳಕೆಯೊಡೆಯಿತು. ಮಾಸ್ತಿಯವರು ಮುಂದೆ ೧೯೨೦ರಲ್ಲಿ ಹಳೆ ಹೊಸ ಕತೆಗಳನ್ನು ಕೂಡಿಸಿ 'ಕೆಲವು ಸಣ್ಣಕತೆಗಳು' ಎಂಬುದನ್ನು ಪ್ರಕಟಿಸಿದರು. ಸಣ್ಣಕತೆಯೆಂಬ ಹೆಸರಿನಿಂದ ಅಚ್ಚಾದ ಮೊದಲನೆಯ ಪುಸ್ತಕವದು ಕನ್ನಡದಲ್ಲಿ. ಕೆರೂರವರ ಕೆಲವು ಕತೆಗಳು 'ನೀಳ್ಗತೆಗಳು' ಎಂದು ಅಚ್ಚಾಗಿವೆ. ಎಲ್ಲ ಕತೆಗಳಿಗೆ ಒಂದು ಗ್ರಂಥದ ರೂಪವಿನ್ನೂ ದೊರೆತಿಲ್ಲ. ಅದೆಂತಿದ್ದರೂ, ಉತ್ತರದಲ್ಲಿ 'ಶ್ರೀನಿವಾಸಸುತ'ರೂ, ದಕ್ಷಿಣಕ್ಕೆ 'ಶ್ರೀನಿವಾಸ'ರೂ ಸಣ್ಣಕತೆಯ ಆದ್ಯರಚಕರೆನ್ನಲು ಅಡ್ಡಿಯಿಲ್ಲ. ಅಂತೇ ಅವರವರ ಕಲೆಯ ಕೆಲವು ವೈಶಿಷ್ಟ್ಯಗಳನ್ನು ತಿಳಿದುಕೊಂಡು, ಅವರಿಂದ ಸ್ಫೂರ್ತಿಹೊಂದಿ, ಇನ್ನು ಮುಂದಿನ ಕತೆಗಾರನು ಹೆಜ್ಜೆಯಿಡಬೇಕಾಗಿದೆ. 'ಶ್ರೀನಿವಾಸಸುತ'ರು ಬರೆದ ೧೫–೧೬ ಕಥೆಗಳಲ್ಲಿ ನೀಳ್ಗತೆಗಳೆಂದು ಬೇರ್ಪಡಿಸಿದ ನಾಲ್ಕು ಕತೆಗಳುಂಟು. ಆದರೆ ಉಳಿದುವುಗಳಲ್ಲಿಯೂ ಸಣ್ಣಕತೆಯ ಸಂಕ್ಷೇಪಕ್ಕಿಂತ ನೀಳ್ಗತೆಯ ವಿಸ್ತಾರದ ಕಡೆಗೇ ಅವರ ಒಲವು ಹೆಚ್ಚು. ವರ್ಣನೆಯ ವಿಷಯ ಬಂದಲ್ಲಿ, ಬಾಯಿದುಂಬಿ ಹೇಳುವಿಕೆ ಮುಂತಾದುದನ್ನು ನೋಡಿದರೆ 'ಶ್ರೀನಿವಾಸಸುತ'ರಲ್ಲಿ ಸಣ್ಣಕತೆಯ ಕಿರಿದರ ಬಲ್ಮೆ ಅಷ್ಟಾಗಿ ಇರಲಿಲ್ಲ. ಅದು ಅವರಿಗೆ, ಬೇಕಾಗಿರಲಿಲ್ಲ. ವೃತ್ತಪತ್ರಲೇಖಕರಾಗಿ ಬಾಳುವೆ ಮಾಡಿದ ಅವರಿಗೆ, ಬಣ್ಣಕೊಟ್ಟು ಬಿಡಿಬಿಡಿಯಾಗಿ ಹೇಳಿದ ಮಾತುಗಳಲ್ಲಿ ಅಕ್ಕರತೆ ಹೆಚ್ಚಾಗಿತ್ತು. ಆದರೆ ಸಣ್ಣಕತೆಯ ಏಕಪರಿಣಾಮದ ಗುಟ್ಟು ಅವರಿಗೆ ಗೊತ್ತಿತ್ತೆಂದು 'ಗುಲ್‌ಬಾಯಿ'ಯಂಥ ಕತೆ

ಗಳಲ್ಲಿ ನೋಡಬಹುದು. ಇದಲ್ಲದೆ, ಅವರ ಕಲೆಯ ಮೂಲರಮ್ಯತೆಯು ಬಳಕೆಯ ಮಾತನ್ನು ಸಾಹಿತ್ಯರಥಕ್ಕೆ ತಂದು ಹೂಡಿದ ಅವರ ಹೊತ್ತಿನ ಹೊಸತನದಲ್ಲಿ ವ್ಯಕ್ತವಾಗುತ್ತದೆ. ಅದು ಅವರ ಪ್ರತಿಭೆಯ ಸೊತ್ತು. ವಿನೋದ, ವರ್ಣನಾಚಾತುರ್ಯ, ಪಾತ್ರಗಳ ನಾಮಕರಣಕೌಶಲ್ಯ ಇವೂ ಅವರ ವಿಶೇಷಲಕ್ಷಣಗಳಾಗಿದ್ದುವು. ಅಂತೇ ತಮ್ಮ ಕತೆ ಹಾಗೂ ಉಳಿದ ಬರೆಹಗಳಿಂದ ತಮ್ಮ ಕಾಲಕ್ಕೆ ಉತ್ತರಕರ್ಣಾಟಕದ ಸಂದಿಗೊಂದಿಗಳಲ್ಲಿ ಕೂಡ ವಾಚಕವೃಂದವನ್ನು ಬೆಳೆಯಿಸಿ, ಎಲ್ಲರ ನಾಲಗೆಯ ಮೇಲೆ ನಲಿದರು. ಆದರೆ ಸಣ್ಣಕತೆಯ ಶಾಸ್ತ್ರೀಯ ಪರಿಚಯವಾಗಲಿ ಅದರ ವಿಪುಲಪ್ರಯೋಗವಾಗಲಿ ಅವರಲ್ಲಿಲ್ಲ. ಹೊಸಹೊಸ ಕಲಾಸ್ಥಿತಿಗಳೂ ಅಷ್ಟಿಲ್ಲ; ಸರಳವಾದ ಕಥನಾತ್ಮಕ ಶೈಲಿಯೇ ಹೆಚ್ಚು.

'ಶ್ರೀನಿವಾಸ'ರು ಸಣ್ಣಕತೆಯ ತಿರುಳನ್ನು ಬಲ್ಲವರಾಗಿ ಬರೆದವರು. ತಮ್ಮ ಮೊದಲ ಸಂಗ್ರಹಕ್ಕೆ ಬರೆದ ಮುನ್ನುಡಿಯಲ್ಲಿ, ಸಣ್ಣಕತೆಯ ಆವಾಗಿನ ಸ್ಥಿತಿಯನ್ನು ಬಣ್ಣಿಸಿರುವರು. ಅದನ್ನು ನೋಡಿದರೆ ಸಣ್ಣಕತೆಯು ಜನಕ್ಕೆ ಆಗೆಷ್ಟು ಹೊಸದಾಗಿತ್ತೆಂಬುದು ತಿಳಿಯುತ್ತದೆ. ಸಣ್ಣಕತ್ತೆಗಳೆಂದು ತಾವು ಬರೆದ ಸಣ್ಣಕತೆಗಳಿಗೆ ಹಾಸ್ಯಮಾಡುವವರೂ ಆಗ ಇದ್ದರೆಂದು ಅವರು ಸೂಚಿಸಿದ್ದಾರೆ ಹಾಸ್ಯಮಾಡಿದವರು ಸತ್ಯ ಸಾರಿದರೆಂದು ಈಗ ಗೊತ್ತಾಗಿದೆ. ಸಣ್ಣಕತ್ತೆಗಳಾದ ಸಣ್ಣಕತೆಗಳು, ದೊಡ್ಡಕತ್ತೆಗಳಾದ ದೊಡ್ಡಕತೆ—ಕಾದಂಬರಿಗಳಿಗಿಂತ ಚೆಲುವಾದುವೆಂದು ಈಗ ಇದೇ ನಮ್ಮ ನಾಡು ಕಂಡಿದೆ! ಶ್ರೀನಿವಾಸರು ತಮ್ಮ ಕತೆಗಳಿಂದ ಮಾಡಿದ ಅಪೂರ್ವವಾದ ಕೆಲಸವು ಇದೇ: ಸಣ್ಣಕತೆಯ ಸಂಕ್ಷೇಪಸ್ವಾರಸ್ಯವು ಕಲಾಪ್ರೇಮಿಗಳ ಮನಸ್ಸನ್ನು ಸೆಳೆದಿದೆ. ಅದೇ ತಮ್ಮ ಮುನ್ನುಡಿಯಲ್ಲಿ ಅವರು ನುಡಿದ ಶಕುನವು ದಿಟವಾಗಿದೆ. 'ಈ ಹತ್ತು ಕತೆಗಳ ಹತ್ತರಷ್ಟು ಕತೆಗಳು—ಇವುಗಳೆಲ್ಲಕ್ಕಿಂತ ನೂರುಪಾಲು ಹೆಚ್ಚಾದವುಗಳನ್ನು, ನಮ್ಮ ನಾಡಿನ ನನ್ನ ಅಣ್ಣಂದಿರಾ, ನನ್ನ ತಮ್ಮಂದಿರಾ, ನೀವು ಬರೆಯಬೇಕೆಂಬುದೇ ನನ್ನ ಅಂತರಾಳದಲ್ಲಿರುವ ಅಧಿಕವಾದ ಆಸೆ. ದೇವರು ಈ ಆಸೆಯನ್ನು ಈಡೇರಿಸಲಿ' ಎಂದುಸುರಿದ ಅವರಾಸೆಯು ಈಡೇರತೊಡಗಿದೆ. ಅವರೇ ಸಣ್ಣಕತೆಗಳ ೨-೩ ಸಂಗ್ರಹಗಳನ್ನು ಅಚ್ಚು

ಗೊಳಿಸಿರುವರು. ಹೊಸಕತೆಗಾರರೂ ಕತೆಗಳೂ ತಲೆದೋರುತ್ತಿರುವುದನ್ನು ಕಣ್ಣಾರೆ ಕಾಣುತ್ತೇವೆ. ಈ ಎಲ್ಲ ಬೆಳೆಗೆ ಶ್ರೀನಿವಾಸರು ನೆಟ್ಟ ನೊಳಕೆಯೇ ಕಾರಣವಲ್ಲವೇ? ಅವರು ಸ್ವತಃ ಸಣ್ಣಕತೆಯನ್ನು ಬರೆದುದು ಪರದೇಶದಿಂದ ಅರಿತ ಆ ಕಲೆಯ ಪ್ರಭಾವದಿಂದ ಅಷ್ಟಾಗಿ ಅಲ್ಲ; ಸಣ್ಣಕತೆ ಅವರ ಕಲಾಹೃದಯದ ನಾಡಿ. ಯಾವುದೇ ಕತೆಯನ್ನು ಬಿತ್ತರಿಸಿ, ಬಣ್ಣದುಂಬಿ, ಬೀಗಿ ಹೇಳುವ ಬಾಯೇ ಅವರದಲ್ಲ. ಮಾತಿನಲ್ಲಿ, ಬರೆಹದಲ್ಲಿ ಅವರಿಗೆ ಸಣ್ಣದೆಂಬುದು, ತುಸುವಾಗಿ ಲೇಸಾಗಿ ಹೇಳುವುದು, ಬಹಳಬೇಕು. ಹತ್ತು ಮಾತುಗಳಲ್ಲಿ ಹೇಳುವುದನ್ನು ಒಂದು ಮುತ್ತು ಮಾತಿನಲ್ಲಿ ಹೇಳಿದರೆ ಅವರಿಗೆ ಹಿಗ್ಗು. ಈ ಬಗೆಯಾಗಿ ಸಣ್ಣಕತೆಯ ಹುಟ್ಟು, ಹುರುಳಿಂದ ಕೂಡಿಬಂದ ಮೂಲಕ, ವಿದೇಶದ ಸಣ್ಣಕತೆಗೆ ಅವರಾತ್ಮ ಅಪ್ಪಿಕೊಂಡಿತು. ಆದರೂ ವಿದೇಶದ ಶಾಸ್ತ್ರಶುದ್ಧವಾದ ಸಣ್ಣಕತೆ ಬರೆವುದಕ್ಕೆ ಅವರು ಒಲ್ಲರೆಂಬುದನ್ನು ಅವರ ಕೆಲವು ಉದ್ದವಾದ ಕತೆಗಳಿಂದಲೂ ಸಣ್ಣಕತೆಗಳಲ್ಲಿಯೇ ಇರುವ ಉಪಕಥೆಗಳಿಂದಲೂ, ರಂಗಪ್ಪನ ಕಥಾವಳಿಯಂತಿದ್ದ ೨–೩ ಕತೆಗಳಿಂದಲೂ ತಿಳಿಯಬಹುದು 'ಸುಬ್ಬಣ್ಣ' ಎಂಬ ಅವರ ಚರಿತ್ರಕಥೆಯು ಅವರ ಕಲೆಯ ಸಿಚ್ಚಗುರುಹು. ಕನ್ನಡದಲ್ಲಿ ಈ ವರೆಗೆ ಅಂಥ ಸುಂದರ ಕೃತಿಯು ಜನಿಸಿರಲಿಲ್ಲವೆಂದು ಕೈವಾರಿಸಿ ಹೇಳಬಹುದು. ಇಂಗ್ಲಿಶ್‌ದಲ್ಲಿಯೂ ಅದರ ತೆರನಾದ ಕಥಾಜಾತಿಯು ವಿರಳವೇ. ಇಂದಿನ ನಮ್ಮ ಕಥಾಸಾಹಿತ್ಯದಿಂದ ಎತ್ತಿ ತೋರಿಸಿ, ಹೆಮ್ಮೆಪಡಬಹುದಾದ ಸೂಕ್ಷ್ಮಸ್ವಭಾವಚಿತ್ರದ ಸಣ್ಣಕತೆಯದು. ವಿಸ್ತಾರದಿಂದ ಅದು ನೀಳ್ಗತೆಯಂತೆ, ಇಲ್ಲವೆ ಕಾದಂಬರಿಯಂತೆ ತೋರಬಹುದಾದರೂ ಅದರಲ್ಲಿ ಅಡಕವಾದ ವಿಷಯಗಳ ಹಿರಿಮೆಯನ್ನು ಆಕಾರದ ಕಿರಿಮೆಯೊಡನೆ ಹೋಲಿಸಿದಾಗ, ಅದು ಸಣ್ಣಕತೆಯೆಂದೇ ತೋರದಿರದು. ಇಂಥ ಹುಟ್ಟುಕತೆಗಾರರ ಹರಕೆಯು ದೊರೆತಿರುವುದೇ ಕನ್ನಡದ ಸಣ್ಣಕತೆಯ ಭಾಗ್ಯ. ಹಿರಿಯರನ್ನು ನೋಡಿ ಕಿರಿಯರು ಬೆಂಬಳಿಸಿ ನಡೆಯುವುದರಿಂದ, ಹಿರಿಯರು ಹಾಕಿಡುವ ಪರಂಪರೆಯು ಹಸನಾಗಿರಬೇಕು, ಮುಂದೆ ಕಿರಿಯರು ಆಗ ಈಗ ತಪ್ಪುಹೆಜ್ಜೆ ಇಟ್ಟರೂ ಕಣ್ಣಮುಂದಿನ ಹಾದಿ ತಪ್ಪದು.

ಸಣ್ಣಕತೆಯು ಈ ಹತ್ತಿಪ್ಪತ್ತು ವರುಷಗಳಲ್ಲಿ ಪ್ರಬುದ್ಧಕರ್ಣಾಟಕ, ಜಯಕರ್ಣಾಟಕ ಮೊದಲಾದ ನಿಯತಕಾಲಿಕಗಳಲ್ಲಿಯೂ ರಾಷ್ಟ್ರಬಂಧು, ವಿಶ್ವಕರ್ಣಾಟಕ ಮೊದಲಾದ ವಾರಪತ್ರಿಕೆಗಳ ಸಾಹಿತ್ಯಸಂಚಿಕೆ ವಿಶೇಷಸಂಚಿಕೆಗಳಲ್ಲಿಯೂ ತಪ್ಪದೆ ಪ್ರಕಟವಾಗುತ್ತಲಿವೆ. 'ಕಥಾಂಜಲಿ' ಎಂಬ ಸಣ್ಣಕತೆಗಳ ಮಾಸಪತ್ರಿಕೆಯು ಕೆಲಕಾಲ ನಡೆದು, ಎಷ್ಟೋ ಕತೆಗಳಿಗೆ ಆಶ್ರಯಕೊಟ್ಟಿತು. ಸಣ್ಣಕತೆಗಳಿಗಾಗಿ ಒಂದಾಣೆಮಾಲೆಯೊಂದು ಮುಂದುವರಿಯುತ್ತಲಿದೆ. ಕೆಲಕೆಲವು ಗ್ರಂಥಮಾಲೆಗಳೂ ಸಣ್ಣಕತೆಗಳ ಸಂಗ್ರಹಗಳನ್ನು ಕೊಡತೊಡಗಿವೆ. ಆದರೆ ಈ ಎಲ್ಲ ಪ್ರಚಾರಕಾರ್ಯದಿಂದ ಒಂದು ಖೇದದ ಮಾತು ಗೊತ್ತಾಗುವುದು. ಕಾಲನಿರ್ಬಂಧ ವಿಟ್ಟು, ಅಬಾಧಿತವಾಗಿ ಒಳ್ಳೆಯ ಕತೆಗಳನ್ನು ಕೊಡುವ ಎದೆಯು ಯಾವ ಪತ್ರಿಕೆಗೂ ಇಲ್ಲ. ಬರೆಯಬಲ್ಲ ಕತೆಗಾರರು ಬಿಡುವಿಲ್ಲದ ಬಂಟರು; ಬಾಳುವೆಯ ದುಡಿಮೆಯಲ್ಲಿ ಉಸಿರ್ಗರೆಯಲು ಕೂಡ ಆಗದಂಥವರು. ಆದರೂ ಕನ್ನಡ ಜನವು ಈಗ ದೊರೆವಷ್ಟು ಸಣ್ಣಕತೆಯ ವಾಙ್ಮಯಕ್ಕೆ ಕೊಡುಗೈದೊರೆಗಳಾಗಿ ಕೈಕೊಟ್ಟರೆ, ಕೆಲವು ಕತೆಗಾರರಾದರೂ ಹೆಚ್ಚೆಚ್ಚು ಬರೆದು ಒಳ್ಳೆಯ ಕತೆಗಳ ಸಂಖ್ಯೆಯನ್ನು ಬೆಳೆಯಿಸಬಹುದು. ಸಣ್ಣಕತೆಯ ಇತಿಗತಿಯನ್ನು ನಾನು ಬರೆಯತೊಡಗಿಲ್ಲ. ಸಣ್ಣಕತೆಯ ಕುರಿತು ಸಣ್ಣಕತೆಯೇ ಸರಿ ಇದು. ಆದರೂ ಸಣ್ಣಕತೆಗಾರರಲ್ಲಿ ಗಣ್ಯರಾಗುತ್ತಿರುವ ಕೆಲವರನ್ನು ನಾನು ಉಲ್ಲೇಖಿಸದೆ ಇರಲಾರೆ. ಅವರೆಂದರೆ— ಆನಂದಕಂದ, ಆನಂದ, ಸಿ. ಕೆ. ವೆಂಕಟರಾಮಯ್ಯ, ಕೆ. ವಿ. ಪುಟ್ಟಪ್ಪ, ಅ. ನ. ಕೃಷ್ಣರಾವ, ಕೆ. ಗೋಪಾಲಕೃಷ್ಣ, ಕೃಷ್ಣಕುಮಾರ ಕಲ್ಲೂರ, ಕಾರಂತ, ದೇವುಡು, ರಾಜರತ್ನ, ಟೇಂಗ್ಸೆ. ಇವರೆಲ್ಲರ ಕಲೆಯಲ್ಲಿ ಸಣ್ಣಕತೆ ನೆಲೆಗೊಂಡಿದೆಯೆಂದು ನಾನು ಧೈರ್ಯವಾಗಿ ಹೇಳಬಲ್ಲೆ. ಗೊರೂರು ರಾಮಸ್ವಾಮಿಯವರು ಸಣ್ಣಕತೆಯನ್ನು ಪ್ರತ್ಯಕ್ಷವಾಗಿ ಬರೆಯದೆ, ಚಿತ್ರಗಳನ್ನು ಬರೆದಿದ್ದರೂ ಅವರಲ್ಲಿ ಸಣ್ಣಕತೆಯ ಸತ್ತ್ವವಿದೆ. ಅವರವರ ಕತೆಗಳ ವಿಮರ್ಶೆ ಇಲ್ಲಿ ಅಪ್ರಸ್ತುತ. ಅವರು ಸಣ್ಣಕತೆಗೆ ಕಲಾಶುದ್ಧಿಯನ್ನೂ ಜೀವನಸಂಪರ್ಕವನ್ನೂ ಹೆಚ್ಚುಹೆಚ್ಚಾಗಿ ತರುತ್ತ, ಕನ್ನಡ ನಾಡಿನ ಮೈಮೆಗೆ ಕಾರಣರಾಗುವರೆಂದು ನಾನು ನಂಬಿರುವೆ. ನಾನು ಮರೆತ, ಉಳಿದವರು ನನ್ನ ಅರಿವುಗೇಡಿತನವನ್ನು ಹಳಿಯಲಿ, ಇಷ್ಟೆ.

ಇನ್ನುಮುಂದೆ ಸಣ್ಣಕತೆಯ ನಿರ್ಮಾಣ ಇಲ್ಲವೆ ವಿಮರ್ಶೆ ಮಾಡುವ ನಾವೆಲ್ಲ ಅದರ ಶಾಸ್ತ್ರಪರಂಪರೆಯಲ್ಲಿ ಮುಳುಗಿ ಏಳಬೇಕು. ಅದರ ಪ್ರಯೋಗಸಹಸ್ರವನ್ನು ಓದಿಯನುಭವಿಸಬೇಕು. ನಾನು ಬರೆದ ಈ ಮುನ್ನುಡಿಯು ಮುಖ್ಯವಾಗಿ ಅದರ ಶಾಸ್ತ್ರಕ್ಕೆ ಸಂಬಂಧಿಸಿದುದು. ಅದರ ಪ್ರಯೋಗವನ್ನು ಈ ಗ್ರಂಥಮಾಲೆಯವರು ಇದೇ ಪುಸ್ತಕದ ಮೂಲಕ ಸಲ್ಲಿಸುತ್ತಲಿದ್ದಾರೆ. ಇನ್ನು ಮುಂದಿನ ಸಣ್ಣಕತೆಯ ಪ್ರತಿಭೆಯಲ್ಲಿ ಶಾಸ್ತ್ರದೃಷ್ಟಿಯು ಕುಂದದಂತಾಗಿ ಮೊಪಸಾ, ಹಾಥಾರ್ನ, ಪೋ ಮೊದಲಾದ ವಿದೇಶೀಯ ಕತೆಗಾರರ ಮಟ್ಟಕ್ಕೆ ಹೋಗುವ ಯೋಗ್ಯತೆಯು ನಮ್ಮ ಸಣ್ಣಕತೆಯಲ್ಲಿ ಬರಲೆಂಬುದೇ ನನ್ನ ಒಳ ಆಸೆ. ಅಂತೇ ಸಣ್ಣಕತೆಯ ಸವಿಲಿಗಾಗಿ ಶಾಸ್ತ್ರದ ಮುಂಗೊಡೆಯು ಬೇಕೆಂದು ಇದನ್ನು ಬರೆದೆ. ಇನ್ನುಮುಂದೆ ಬರುವ ಸವಿಲುಗರಿಯನ್ನು ನೋಡುವಾಗೆಲ್ಲ ಈ ಮುಂಗೊಡೆಯ ಬಳಕೆಯಾದರೆ ಈ ಮುನ್ನುಡಿಯು ಕೈಕೊಂಡ ಕೆಲಸವು ಪೂರೈಸಲಾಯ್ತೆಂದು ನಾನು ತಿಳಿಯುವೆ.

ವಿಲಿಂಗ್ಡನ್ ಕಾಲೇಜು
ಸಾಂಗಲಿ

ರಂ. ಶ್ರೀ. ಮುಗಳಿ

# ಪರಿವಿಡಿ

# ಛಪ್ಪರ್ ಬಂದ್* ೲ ೲ ೲ ೲ ೲ

ಧಾರವಾಡವೊಂದು ಚಿತ್ರವಿಚಿತ್ರವಾಗಿ ಹಬ್ಬಿದ ಊರು. ಹಳೆಯೂರಿನ ಪೇಟೆ-ಕೋಟೆಗಳ ದಿಕ್ಕಿನಲ್ಲಿಯೇ ಮುಂದೆ ಸಾಗಿದರೆ, ಸಾರ್ವಜನಿಕ ಸಂಸ್ಥೆಗಳ ಸುಂದರವಾದ ಕಟ್ಟಡಗಳು, ಮಾಳಮಡ್ಡಿ, ಸಾರಸ್ವತಪುರದ ಸಿರಿವಂತರ ಮಂದಿರಗಳು ಕುದುರೆಯ ನಾಲಿನ ಮತ್ತೊಂದು ತುದಿಯಲ್ಲಿ ಸೇರುವವು. ಕರ್ನಾಟಕದಲ್ಲಿಯ ಸಂಸ್ಕೃತಿಯ ಗಂಡುಮೆಟ್ಟು ಎನಿಸುವ ಈ ಪಟ್ಟಣದ ಮಧ್ಯಭಾಗದಲ್ಲೊಂದು ಬರೆ; ವ್ಯಾದಾರ ಓಣಿ, ಮದಾರಮಡ್ಡಿ ಕೊನೆಗೆ ಗುಮಾನೀ ಜನವಸತಿಯ ಗುಡಿಸಲುಗಳು—(Criminal tribes Settlement) ಇದೊಂದು ಓರಣದ ಹುಡುಗನು ಅಚ್ಚುಕಟ್ಟಾಗಿ ಬರೆದ ಬರೆಹದ ಮೇಲಿನ ಗೋಣ್ಣೆ; ಮಕ್ಕಳ ಗಲ್ಲದ ಮೇಲಿನ ದೃಷ್ಟಿಯ ಬೊಟ್ಟು; ದಾರಿದ್ರ್ಯ-ಖಡ್ಗದ ಮಾಯದಂತಹ ಗಾಯ. ಕಾವ್ಯದ ಕಣ್ಣಿನಿಂದ ಕಾಣುವವರಿಗೆ ಕಲಾನಿಧಿಯ ಕಲಂಕದಂತೆ ಕಂಗೊಳಿಸುತ್ತಲೂ ಇರಬಹುದು.

ಹುಬ್ಬಳ್ಳಿಯ ಅಗಸೆಯ ಸುಂಕದಕಟ್ಟೆಯ ಎದುರಿನ ಇಳುಕಲಿನಲ್ಲಿ—ಬಲಬದಿಯಲ್ಲಿ— ಮೊದಲು ಹತ್ತುವ ತಗಡಿನ ಶೆಡ್ಡು ಪ್ರೆಸ್ಸಿನದು. ಅದಕ್ಕೆ ಹೊಂದಿ ಇರುವ ಚೆಪ್ಪರಗಳೊಂದರಲ್ಲಿ, ಐದು ತಾಸಿನ ಸುಮಾರಿಗೆ ಕಾಳಮ್ಮನು ರೊಟ್ಟಿಯನ್ನು ಮಾಡುತ್ತ ಕುಳಿತಿದ್ದಳು. ಅವಳ ಮೈಬಣ್ಣ ಕಪ್ಪೇ; ನಿಲುವಿಕೆ ಸಾಧಾರಣ, ತುಂಬಿದ ಮೈ, ಮೋರೆ ದುಂಡಾದರೂ ತುಸು ಹರವಾದದ್ದು. ಅವಳ ಕಣ್ಣು-ಕೂದಲುಗಳು

---

* ಒಂದು ಕಾಡು ಜಾತಿಯವರು—ಕೊಂಡರು, ಭಿಲ್ಲರು—ಇದ್ದಂತೆ.

ಹೇಳಿಕೊಳ್ಳುವಂಥವೇನೂ ಇರಲಿಲ್ಲ. ಮಾಸಿದ ದಟ್ಟಿ–ಕುಪ್ಪಸಗಳು. ಆಭರಣಗಳೆಂದರೆ ಕೊರಳೊಳಗೊಂದು ಬೆಳ್ಳಿಯ ಸರಿಗೆ. ಮೂಗಿನ ಲ್ಲೊಂದು ತೆನೆಯಾಕಾರದ ಬಂಗಾರದ ಮೂಗುವಟ್ಟು. (ಒಳಗೆಲ್ಲಾ ಅರಗೇ). ವಯಸ್ಸು ಇಪ್ಪತ್ತು ಇಪ್ಪತ್ತೆರಡು ಇರಬಹುದು. ಗುಡಿಸ ಲಿನಲ್ಲಿ ನೋಡಿದರೆ ಬಡತನವು ಒಡೆದು ಕಾಣುವಂತಿತ್ತು. ರೊಟ್ಟಿಯ ಹಂಚು, ಒಂದು ತಂಬಿಗೆ ಇವುಗಳನ್ನು ಬಿಟ್ಟು ಉಳಿದೆಲ್ಲ ಸಾಮಾನುಗಳು ಮಣ್ಣಿನವೇ. ಒಲೆಯ ಹತ್ತಿರವೇ—ಒಂದು ಪಾತ್ರೆಯಲ್ಲಿ—ಅವರೆಯ ಗುಗ್ಗರಿಯು ಸಿದ್ಧವಾಗಿ, ಉದರಕ್ಷೇತ್ರದ ಯಾತ್ರೆಗೆ ರೊಟ್ಟಿಯ ಜೋಡಿನ ಹಾದಿ ನೋಡುತ್ತಿತ್ತು. ಕಾಳಮ್ಮನು ದಿನಾಲು ರೊಟ್ಟಿ ಮಾಡುವ ಹೊತ್ತು ಇದಲ್ಲ; ಎರಡು ತಾಸು ಹೊತ್ತು ಏರುವದರಲ್ಲಿಯೇ. ಮೂರು ಮೈಲಿನ ಮೇಲೆ ಲೈನ† ಖಡಿಯ ಕೆಲಸಕ್ಕೆ ಅವಳ ಗಂಡನು ಹೋಗಬೇಕಾದ್ದರಿಂದ ಬೆಳಗಿನಲ್ಲಿಯೆ ಮಾಡುವಳು. ಇಂದು ಅದು ಬದಲಾಗಿದೆ. ಈ ಬದಲಾವಣೆಗೆ ತಾನು ಕಾರಣಳೆಂಬ ಅಭಿಮಾನದ ಮುಗುಳು ನಗೆಯು ಅವಳ ಮೋರೆಯ ಮೇಲೆ ಆಡುತ್ತಿದೆ. ದೀಪಗಂ ಬದ ಮೂಲಕಿಗಿರುವ ಮನೆಯ ಗೌಂಡಿ–ಬಸಪ್ಪನ ಹೆಂಡತಿಗೆ ಇವಳು ಹೇಳಿಕೊಂಡು, ಅವನ ಕೈಕೆಳಗೆ ಆಳೆಂದು ಒಯ್ಯುಹಚ್ಚಿದ್ದಳು. ಇಲ್ಲವಾ ದರೆ ಇವಳ ಗಂಡನಿಗೆ, ಕಂತ್ರಾಟದಾರನ ನಾಲ್ಕಾಣೆ ಕೂಲಿ, ಖಡಿಯ ಕೆಲಸ, ರೊಟ್ಟಿ ಕಟ್ಟಿಕೊಂಡು ಮುಂಜಾನೆ ಹೋಗಿ ಸಂಜೆಗೆ ಬರುವದು ಇವೇನು ತಪ್ಪುತ್ತಿದ್ದಿಲ್ಲ. ಅಲ್ಲಿಯೆ ಮಾಳಮುಡ್ಡಿಯ ಮೇಲೆ ನಾಡ ಗೌಡರ ಮನೆ ಬೆಳೆಸುವದಿದ್ದದರಿಂದ ಎರಡು ತಿಂಗಳ ಕೆಲಸವು ಸಾಗ ಬಹುದಾಗಿತ್ತು. ಮಧ್ಯಾಹ್ನಕ್ಕೆ ಬಿಸಿ ರೊಟ್ಟಿ ತಿನ್ನಲು ಬರಬಹುದು. ಮೇಲೆ ಏಳಾಣೆ ಕೂಲಿ. ಇಷ್ಟಾದ ಮೇಲೆ ಯಾರೂ ಅಭಿಮಾನಪಟ್ಟು ಕೊಳ್ಳುವ ಸಂಗತಿಯೇ. ಅವಳು ಕೊನೆಯ ರೊಟ್ಟಿಯನ್ನು ಸುಡುವದ ರಲ್ಲಿ ಇದ್ದಳು. ಉರಿ ಮಾಡಬೇಕಾದ್ದರಿಂದ ಬಗ್ಗಿ ಊದಿದಳು. ಹೊಗೆಯೇ ಮುಸುಕಿತು. ಮೋರೆಯನ್ನು ಬೇರೆ ಕಡೆಗೆ ತಿರುವಿದಳು. ಬಾಗಿಲಲ್ಲಿ ಅವಳ ಗಂಡ. ಬೇಗನೆ ಏಕೆ ಬಂದನೆಂಬ ಶಂಕೆಯು ಹುಟ್ಟಿದೊಡನೆಯೇ

† ಜಲ್ಲಿಕಲ್ಲು.

ಅವಳ ಸಗೆಯು, ಸ್ಪಿರಿಟು ಕೂಡಿದ ಸುಗಂಧ ದ್ರವ್ಯದಲ್ಲಿಯ ಪರಿಮಳ ದಂತೆ ಮಾಯುವಾಯಿತು. ದುರ್ಗಪ್ಪನು ಬಂದು ಮೂಲೆಯಲ್ಲಿಯ ಸಂದುಕದ ಮೇಲೆ ಬೇಸರಿಕೆಯಿಂದ ಕೂತನು. ಬೇಗನೇ ಬಂದ ಕಾರಣ ವನ್ನು ಅವನಾಗಿಯೇ ಹೇಳುವನೆಂದು ಅವಳು ಒಂದು ಕ್ಷಣ ಹಾದೀ ನೋಡಿದಳು. ಕೊನೆಗೆ ತಾನೇ ಕೇಳಿದಳು.

" ಯಾಕ, ಗಡಾ ಬಂದೀ ? ಮೈಯ್ಯಾಗ ಕಸರ ಬಂದೈತೇ ? " ಹಣೆಯ ಮೇಲಿನ ಎರಡೂ ಕೈಗಳನ್ನು ಗದ್ದದ ಕೆಳಗಿಟ್ಟು ದುರ್ಗಪ್ಪನು ಅಂದನು. " ಎಲ್ಲೀದು ನನಗೇನಾಗೈತಿ ಧಾಡಿ ! ಮಂದಿ ಕಣ್ಣಿಗಾಗೈತಿ ಕಸರು. "

ಕಾಳಮ್ಮನಿಗೇನೂ ಅರ್ಥವಾಗಲಿಲ್ಲ. ಆದರೂ ಸುಮ್ಮನಿದ್ದಳು. ಕ್ಷಣ ಹೊತ್ತಿನ ಮೇಲೆ ದುರ್ಗಪ್ಪನು ಸಾದ್ಯಂತ ಸಂಗತಿಯನ್ನು ತಿಳಿಸಿ ದನು. ಮನೆಯ ಯಜಮಾನರಿಗೆ ಇವನು ಛಪ್ಪರ ಬಂದನೆಂದು ತಿಳಿದು ಬಂದ ಕೂಡಲೇ ಅವರು ಇವನ ಕೆಲಸ ಬಿಡಿಸಿ, ತುಡುಗು ಸೂಳೇ ಮಕ್ಕಳೆಂಬ ಬೈಗಳ ಉಡುಗರೆಯನ್ನು ಕೊಟ್ಟು, ಮನೆಗೆ ಕಳಿಸಿದ್ದರು. ಛಪ್ಪರಬಂದರು ಬಂದು ನೆಲಸಿದಂದಿನಿಂದ ಮಾಳಮಡ್ಡಿಯ ಮೇಲೆ ತುಡುಗಗಳ ಸುಗ್ಗಿಯಾಗಿದೆಯೆಂದೂ—ಅವರನ್ನು ಮನೆಯ ಸನಿಯಕ್ಕೆ ಹಾಯಗೊಡಬಾರದೆಂದೂ ಅವರ ಮತ.

ಖಡಿಯ ಕೆಲಸವನ್ನಂತೂ ಬಿಟ್ಟಂತಾಗಿದ್ದಿತು. ಇದೂ ಇಲ್ಲದಂತಾ ಯಿತೆಂಬ ವಿಚಾರವು ಬಂದೊಡನೆಯೇ ದುರ್ಗಪ್ಪನ ಮೋರೆಯು ಸಪ್ಪ ಗಾಯಿತು. ಈ ವಾರ ದುಡಿತವಿಲ್ಲದಿದ್ದರೆ ಮುಂದೇನು ಗತಿಯೆಂಬ ಪ್ರಶ್ನೆಯು ಅವನನ್ನು ಪೀಡಿಸಹತ್ತಿತು. ಮುಂದಿನ ಬುಧವಾರದ ವರೆಗೆ ಕಂತ್ರಾಟದಾರನ ಕೆಲಸಗಾರರ ಗ್ಯಾಂಗಿನಲ್ಲಿ ಪ್ರವೇಶವಾಗುವಂತಿರ ಲಿಲ್ಲ. ಇದ್ದರೂ, ಇವನಿಗೂ ನಾಲ್ಕಾಣೆಯ ಕೂಲಿಯ ಕೆಲಸವು ಬೇಡ ವಾಗಿತ್ತು. ಮಧ್ಯಾಹ್ನದಲ್ಲಿ ಅಲ್ಲಿಯೇ ಬೇರೆ ಕಡೆಗೆ ಕಟ್ಟಡದ ಕೆಲಸ ನಡೆದಲ್ಲಿ ಹೋಗಿ ಕೇಳಬೇಕೆಂದು ನಿಶ್ಚಯಿಸಿದನು. ಎಲ್ಲರೂ ಆ ಮನೆ ಯವರಂತೆ ಇರಲಿಕ್ಕಿಲ್ಲವೆಂಬ ಆಶೆ ಅವನಿಗೆ. ಮೇಲಿನ ವರ್ಗದವರು

ಮಾಡಿದ ಒಳಸಂಚಿನ, ಸಮಾಜ ವ್ಯವಸ್ಥೆಯೇ ಇವರ ದೆಶೆಯಿಂದ ಹಚ್ಚಿದ ಕಲ್ಪನೆಗಳ ಮುಳ್ಳುಬೇಲಿಯ ಅರಿವು ಅವನಿಗೆ ಇನ್ನೂ ಇರಲಿಲ್ಲ.

ಬಂದ ಕಷ್ಟವನ್ನು ಪರಿಹರಿಸಲು ಸೂಚಿಸುವ ತನ್ನದೊಂದು ಉಪಾಯವೆಂದು ಕಾಳಮ್ಮನೆಂದಳು. "ಕಚೇರ್ಯಾಗಿದ್ ನಿನ್ನ ಬೆತ್ತದ ಕುರ್ಚಿ, ಚಾಪಿ ಮಾರಿ ಏನರ ಲೆಕ್ಕ ಬಂದೈತೇನು ಕೇಳಿ ಬಾ"

"ಮದ್ಲ ರಪಾಟ್ಯಾಗೇನ ಇಲ್ಲ ಸಾಬರಲ್ಲೆ ೧೦–೧೨ ಮಾರಿದವ್ರು, ಮಾರಿದವು. ಆಮ್ಯಾಗ ಅದರ ಸುದ್ದಿಲ್ಲ. ಈ ಊರಾಗ ಈಟss ಸೈ."

ಇಷ್ಟರಲ್ಲಿ ಅವನನೆರಡೂ ಹುಡುಗರು ಅಳುವದು ಕೇಳಬಂದಿತು. ಅರ್ಧ ಬೇಸರ, ಅರ್ಧ ಸಿಟ್ಟು (ಯಾರ ಮೇಲಿನದೋ) ಕೂಡಿದ ದನಿಯಿಂದ ಕಾಳಮ್ಮನು ಮಾತನಾಡಿದಳು.

"ಇವಕ್ಕೇನ್ ಧಾಡ್ಯಾತೋ ಅಶೋಕ. ಇದೇ ಈಗ ನೀರಿಗ್ಹೋಗೇದಾಗ ಮ್ಯಾಗಿನ ಕೇರ್ಯಾಗಾಡತಿದ್ವು."

ಆದರೂ ತಾಯಿಯ ಕರುಳು. ಬಂದ ಮಕ್ಕಳ ಮೋರೆ ನೋಡಿ ಕೇಳಿದಳು.

"ಏನಾತು ? ಯಾರ್ಹೊಡದರೂ ?"

"ಆ ಮುನಿ ಹಂತೀಲಿ ಹಾರೂರು, ಆ ಹುಲೀ ಚಾಳೀನದವರೂ." ದುರಗಪ್ಪ ತವಕದಿಂದ ಕೇಳಿದನು.

"ಏನ ಮಾಡಿದರವರು ?"

"ಎಲ್ಲಾರನೂ ಹೊಡದರು. ಒಣ್ಯಾಗ ಆಡಬಾರದಂತ. ಇನ್ನೊಮ್ಮೆ ಬಂದsರ ಬರ್ರಿ ನಿಮ್ ಕಾಲss ಮುರೀತೇವೆಂದ್ರು"

"ಅವರ್ಹುಡುಗರ ಕೂಟ ಆಡಾಕ್ಯಾಕ ಹೊಕ್ಕೇರಿ, ಇಲ್ಲೇ ಆಡ್ರಿ." ದುರಗಪ್ಪ ಅಂದ.

"ಯಾಕ ಅವರ ಕೂಟ ಆಡಿದರೇನಾತು ?" ಕಾಳವ್ವಾ ಕೇಳಿಧಳು.

"ಅವರಿಗೇ ಕೇಳ್ಹೋಗು" ಎಂದು ದುರಗಪ್ಪನೆಂದನು.

ಅಂದು ಮೂರು ಸಂಜೆಯ ಮುಂದೆ ಇವರ ಗುಡಿಸಲಿನ ಹತ್ತಿರ ಹೊಲದಲ್ಲಿಯೇ ಒಂದು ಆಡಿನ ಮರಿಯು ತಪ್ಪಿಸಿಕೊಂಡು ಹಿಂದುಳಿದಿತ್ತು. ಇವರ ಹುಡುಗರು ಮೋಜಿಗಾಗಿ ಹಿಡಿದು ತಂದು ಕಟ್ಟಿದರು. ಕೆಲಹೊತ್ತು ಒದ್ದಾಡಿ, ಚಿನ್ನಾಟವಾಡಿ ಕೊನೆಗೆ ಇವರ ಗುಡಿಸಲಿನಲ್ಲಿಯೇ ಬಿದ್ದುಕೊಂಡಿತು. ಒಂದು ತಾಸು ರಾತ್ರಿಯ ಸುಮಾರಿಗೆ ಶಿರಸ್ತಾರ್ ಸಾಹೇಬರ ಇಬ್ಬರು ಸಿಪಾಯರು ಹುಡುಕುತ್ತ ಬಂದರು. ತಪಾಸು ಹಚ್ಚಿದರು. ಒಬ್ಬನು ಪೊಟ್ಟೆ ಹೊತ್ತಂತೆ ಆಡಿನ ಮರಿಯನ್ನು ಹೊತ್ತುಕೊಂಡು ನಡೆದನು. ಮತ್ತೊಬ್ಬನು ದುರಗಪ್ಪನ ಸಮಾಚಾರಕ್ಕೆ ನಿಂತನು. ಕದ್ದರೂ ಕದಿಯಲಿ, ಸಾಹೇಬರ ಮನೆಯ ಆಡು ಕದಿಯಬೇಕೇ ಇವನು ! ಕತ್ತಲೆಯ ಹೊತ್ತಿನ ಬಟ್ಟೆಯ ಸಿಟ್ಟನ್ನು ದುರಗಪ್ಪನ ಮೇಲೆ ಒಳಿತಾಗಿ ತೀರಿಸಿದನು. ಕೈಯಲ್ಲಿಯ ಬಡಿಗೆಯಿಂದ ಎರಡು ಸೂನ್ನೆ ಇಕ್ಕಿಯೇ ಕೇಳಿದನು.

"ತುಡುಗು ಸೂಳೇಮಕ್ಕಳ, ಹಿಂತಾದಕೂ ಕೈಹಾಕಾಕ ಹತ್ತಿದಿರ್‍ಯಾ ?"

ಹುಡುಗರು ಕಟ್ಟಿ ಹಾಕಿದರೆಂದು ದುರಗಪ್ಪ ಹೇಳಹೋದರೆ ಕೇಳುವವರಾರು ?

"ಬದ್ಮಾಷ್, ಹುಡುಗರ ಸುದ್ಯಾಗ ಹಾಕಿ ಪಾರಾಗ ಬೇಕಂತೀ ಮತ್ತ ! ಹಂಗಽ ನಿನ್ನ ಚಮುಟಾ ಬೆಳಗೇನು. ಉಳಕೊಂಡಿ ಹೋಗು." ಎಂದು ಇವನ ಕಡೆಗೆ ತುಚ್ಛತೆಯಿಂದ ನೋಡಿ, ಪೋಲೀಸ ಠಾಣೆಗೆ ಒಯ್ಯದೆ ಬಿಟ್ಟದ್ದೊಂದು ಮಹದುಪಕಾರ ಮಾಡುವನೆಂಬ ರೀತಿಯಿಂದ ಹೊರಟು ಹೋದನು.

ಹೋದಲ್ಲಿ ಬಂದಲ್ಲಿ ಕುಕ್ಕಿಸಿಕೊಂಡವನಿಗೆ ಮನೆಗೆ ಬಂದೊಡನೆಯೇ ತಲೆಮೊಡದಂತಾಯಿತು. ಎರಡು ತಾಸಾದರೂ ಹೊಟ್ಟೆಯ ಪರಿವೆಯೇ ಇರಲಿಲ್ಲವನಿಗೆ. ಮೂಲೆಯಲ್ಲಿ ಸುಂದಾಗಿ ಕುಳಿತು ಬಿಟ್ಟ. ಮುಂಜಾವಿನಿಂದಲೂ ಇದುವರೆಗೆ ನಡೆದ ಸಂಗತಿಗಳನ್ನು ಯಾವದೋ ಒಂದು ದಾರದಿಂದ ಅವನ ಮನವು ಪೋಣಿಸುತ್ತಿತ್ತು. ಯಾವದೋ

ಒಂದು ಆಕಾರದಲ್ಲಿ ಹೊಂದಿಸುತ್ತಿತ್ತು. ಅದರಲ್ಲಿ ಕೊನೆಯ ಮಣಿಯಾಗಿ ಬಂತು; ಒಂಬತ್ತುವರೆಯ ಹಾಜರಿ.

ಸುತ್ತಲೂ ಒಡ್ಡಿದ ಬಲೆಯ ಸರಿಗಂಟಿನ ಹಿಡಿತವು ತಿಳಿದಂತಾಯಿತು. ಬಂಧಿಸಿದ ಮಂತ್ರದ ಬೀಜಾಕ್ಷರವು ದೊರೆತಂತಾಯಿತು. ಎತ್ತೆತ್ತಲೂ ದಾಟಗೊಡದಂತೆ, ಕೈಹಚ್ಚಗೊಡದಂತೆ ಮಾಡುವ ತಂತಿಗಳಲ್ಲಿ, ವಿದ್ಯುಚ್ಛಕ್ತಿಯನ್ನು ಹರಿಬಿಡುವ ಬಟನ್ ಕೈಗೆ ಹತ್ತಿದಂತಾಯಿತು. ಇಷ್ಟರಲ್ಲಿ ಎದುರಿನ ಪೇರಲ ತೋಟದಲ್ಲಿ ಅದಾರೊ ಡಬ್ಬಿಯನ್ನು ಬಾರಿಸತೊಡಗಿದರು.

'ನಡೀ ನಡೀ ಇಲ್ಲಿಂದ' ಎಂಬ ಶಬ್ದಗಳು ಇವನ ಕಿವಿಗೆ ಸ್ಪಷ್ಟವಾಗಿ ಕೇಳಹತ್ತಿದವು. ಅಂದಿನಿಂದ ಇವನು ಕಾಣದಂತಾದನು.

ದುರಗಪ್ಪನು ಹೋದ ಒಂದು ತಿಂಗಳಲ್ಲಿಯೇ ಅವನ ಹತ್ತುಗಡೆಯವನಾವನೋ ಕಾಳವ್ವನನ್ನು ತನ್ನಲ್ಲಿಗೆ ಕರೆದೊಯ್ಯಬೇಕೆಂದು ಬಂದಿದ್ದನು. ಬೇಸತ್ತು ಬೆಂಡಾಗಿ ಎದ್ದುಹೋದ ಗಂಡನು ತಿರುಗಿ ಬರುವನೆಂಬ ಆಶೆಯಿಂದಲೋ—ಅಪ್ಪಿತಪ್ಪಿ ಬಂದಾಗ ತಾನು ಇರದಿದ್ದರೆ, ಬಾಳುವೆಯು ಮೂರಾಬಟ್ಟೆಯಾಗುವದೆಂಬ ಅಂಜಿಕೆಯಿಂದಲೋ ಅವಳಂತೂ ಅವನ ಮನೆ ಸೇರಲಿಲ್ಲ. ಐದಾರು ತಿಂಗಳುಗಳು ಹಾಗೆಯೇ ಕಳೆದು ಹೋದುವು. ಬರಬರುತ್ತ ಇವಳ ಸ್ಥಿತಿಯು ಸುಧಾರಿಸಿದ ಲಕ್ಷಣವು ಕಂಡು ಬಂತು. ನೆರೆಹೊರೆಯವರ ಗ್ರಹಿಕೆ ಬೇರೆಯಾಯಿತು. ಗಂಡನಂತೂ ಇಲ್ಲಾ. ಇವಳ ದುಡಿಮೆಯೂ ಅಷ್ಟಕ್ಕಷ್ಟೇ. ಆದರೂ ಇದೇನು! **पीनो देवदत्त: दिवा न भुंक्ते.** ಎಲ್ಲರೂ ಕುಚು ಕುಚು ಮಾತಾಡಹತ್ತಿದರು. ಅದರಲ್ಲಿ ಇತ್ತೀಚೆ ನಾಲ್ಕೈದು ದಿನಗಳಿಂದ ಮೂರು ಸಂಜೆಯ ಮಬ್ಬಿನಲ್ಲಿ, ಯಾವನೋ ಒಬ್ಬ ಚಣ್ಣಾ—ಬೂಟು ಹಾಕಿದವನ ಕೂಡ ಗಿಡದಡಿಯಲ್ಲಿ ಅವಳು ಮಾತಾಡುತ್ತ ನಿಂತದ್ದನ್ನು ಯಾರೋ ನೋಡಿದ್ದರು. ಆ ಮೇಲೇನು ಕೇಳುವದು!

* * * * *

ಜಪಾನೀ ಧರ್ತಿಯ ಸ್ಕ್ರೀನ್ (Screen) ಗಳು, ಮಾನೀ ಕಡ್ಡಿಯಿಂದ ಹೆಣೆದ ಮಕ್ಕಳಾಟಿಗೆಯ ಸಾಮಾನುಗಳು, ಅಲಂಕಾರದ ವಸ್ತು

ಗಳು, ಚಿತ್ರಕಾರದ ಬಣ್ಣಬಣ್ಣದ ಆಕಾಶಬುಟ್ಟಿಗಳು ಇವುಗಳನ್ನೆಲ್ಲ ಮಾರುವ ಚೀನಾ ಉಡುಪಿನವನೊಬ್ಬನು ಊರಲ್ಲಿ ತಿರುಗುತ್ತಿದ್ದನು. ಮೈಯಲ್ಲಿ ಶರ್ಟುಕೋಟು ಕೂಡಿಯೇ ಆಗುವಂಥದೊಂದು ಅಂಗಿ, ಲಗಳ ಚಣ್ಣ, ಕಾಲಲ್ಲಿ ಅಗಲವಾದ ಬೂಟು, ತಲೆಯ ಮೇಲೆ ಚಳಿ–ಮಳೆ –ಗಾಳಿ-ಬಿಸಿಲುಗಳೆಲ್ಲವನ್ನೂ ತಡೆಯುವಂಥದೊಂದು ಟೊಪ್ಪಿಗೆ. ಬೋಳಿಸಿದ ಮೀಸಿ. ಹರಕು–ಮುರುಕು ಮುಸಲ್ಮಾನಿಯಲ್ಲಿ ಅವನ ಮಾತು. ಸೂಕ್ಷ್ಮವಾಗಿ ನಿರೀಕ್ಷಿಸುವವರಿಗೆ ಅವನು ಚೀನೀ ಅಲ್ಲವೆಂದು ತಟ್ಟನೆ ಹೊಳೆಯ ಬಹುದಾಗಿತ್ತು. ಆದರೇನು ವ್ಯವಹಾರಕ್ಕಾತಂಕ. ತುಡುಗಿನ ಬಹುಮೆಗಳಲ್ಲ. ಹೊಸದಾಗಿರುವ ಕೌತುಕದ ಕೈಗಾರಿಕೆಯ ಬಹುಮೆಗಳು. ಭರದಿಂದ ಮಾರಹತ್ತಿದವು.

ಇದೇ ಸುಮಾರಿಗೆ ಶುಕ್ರವಾರ ಪೇಟೆಯಲ್ಲಿದ್ದ ಒಬ್ಬ ಶಾಲಾ ಮಾಸ್ತರನ ಮನೆ ಕಳವಾಗಿತ್ತು. ಪೋಲೀಸರ ಸಂಶಯವೆಲ್ಲ ಸುತ್ತುತ್ತಿತ್ತು ಛಪ್ಪರಬಂದರ ಸುತ್ತಲು. ಆದರೆ ಹೊಸದಾಗಿ ಬಂದ ಅಮಲದಾರರ ವಿಷಯಕ್ಕೆ ಸುದ್ದಿಗಳನ್ನು ಕೇಳಿ, ಒಮ್ಮೆಲೇ ಝಡತಿ–ದಸ್ತಗೀರು ಮಾಡಲು ಧೈರ್ಯ ಸಾಲದು. ಆದರೂ ಪಾಳತಿಯ ಮೇಲಿದ್ದರು. ವಿದೇಶೀಯವಾಗಿರುವ ಹೊಸ ವೋರೆಗೆ ಸಹಜವಾಗಿ ಅಂಟಿಕೊಳ್ಳಬಹುದಾದ ಸಂಶಯದ ಶಕೆಯು ಆಕಾಶಬುಟ್ಟಿ ಮಾರುವವನಿಗೆ ಬಡಕೊಂಡಿತ್ತು. ಎರಡರ ಮೋರೆಗಳೂ ಕೂಡಿದವು.

ಕಾಳಮ್ಮನು ಬೆಟ್ಟಿಗೆಂದು ಗೊತ್ತು ಮಾಡಿದ್ದ ಗಿಡದೆಡೆಗೆ, ಗುಡಿಸಲುಗಳ ಹಿಮ್ಮಗ್ಗಲಿಗೆ ಸಾಗಿದಳು. ಒಬ್ಬ ಪೋಲೀಸನೂ ಸ್ವಲ್ಪ ದೂರದಲ್ಲಿ ಬೆನ್ನು ಹತ್ತಿದನು. ಇತ್ತ ಹುಲ್ಲು ಹೆಣಿಕೆಯ ಸಾಬನು ತನ್ನ ಸಾಮಾನುಗಳು ಸೂರುವ ಸಂಭವವೇ ಇಲ್ಲದ ಕಡೆಗೆ ಸುಳಿಯುವದು ಸುಂಕದಕಟ್ಟೆಯ ಹತ್ತಿರವಿದ್ದ ಪೋಲೀಸನನ್ನು ಎಬ್ಬಿಸಿತು. ಈ ಇಬ್ಬರ ಬೆಟ್ಟಿಯೆಂದರೆ ಸಂಕೋಲೆಗಳ ಸಾಕ್ಷಾತ್ಕಾರವೇ. ಆಯಿತು. ಒಯ್ದು ಹಾಕಿದರು ಲಾಕ್‌ಪ್ಪಿನಲ್ಲಿ. ಇತ್ತ ಕಾಳಮ್ಮನ ಗುಡಿಸಲಿನ ಝಡತಿಯೂ ಯಿತು. ಹಣಮಂತದೇವರ ದರ್ಶನ ಮಾಡಿಸಿದರೂ ಆದ ಕಳವಿನ ಪತ್ತೇ ಹತ್ತಲಿಲ್ಲ. ವೇದನೆಯ ಭರದಲ್ಲಿ ಒದರಿದ 'ಅಯ್ಯಯ್ಯವ್ವಾ' ಎಂಬು

ದಂತೂ ಪೋಲೀಸರ ಪ್ರಯತ್ನಕ್ಕೆ ಪುಟಕೊಟ್ಟಿತು. ತಾಳ್ಮೆಯ ಮೇರೆ ಮೀರಿದ ಮೇಲೆ ಸಾಬನು ತನ್ನ ನಿಜಸಂಗತಿಯನ್ನು ಹೇಳಿದನು. ಐದಾರು ತಿಂಗಳುಗಳ ಹಿಂದೆ ಓಡಿ ಹೋದ ದುರಗಪ್ಪನು ತಾನು ಎಂದು. ಊರೂರು ತಿರುಗುತ್ತ ಉದ್ಯೋಗ ಚನ್ನಾಗಿ ಸಾಗಿತ್ತು. ತನ್ನ ಕಷ್ಟ ಪರಂಪರೆಗೆ ಕಾರಣವಾದದ್ದು ತನ್ನ ಮಕ್ಕಳ ಬಾಳನ್ನು ಹಾಳಮಾಡ ಬಾರದೆಂಬವಾಗಿ, ಅವರೆಲ್ಲರನ್ನೂ ಎತ್ತಿ ಕರೆದೊಯ್ಯಲು ದುರಗಪ್ಪನು ಬಂದದ್ದು, ಹೊಟ್ಟೆ ತುಂಬಿಕೊಳ್ಳುತ್ತ ಹಾಗೆಯೇ ದೂರ ದೂರ ದೇಶಕ್ಕೆ ಹೋಗಬೇಕೆಂದು ಮಾಡಿದ್ದದ್ದು, ಅದಕ್ಕಾಗಿ ಎಲ್ಲ ಸಿದ್ಧತೆಯಾದೊಡನೆ ಹೊರಡುವ ಸಂಕಲ್ಪವಿದ್ದದ್ದು—ಎಲ್ಲವನ್ನೂ ಹೇಳಿದಾ.

ಕಳವಿನ ಅಪರಾಧದ ತಪಾಸಾಗದಿದ್ದರೂ ಮಾಡಿದ ದಸ್ತಗೀರು ಪುಕ್ಕಟೆ ಹೋಗಲಿಲ್ಲವೆಂಬ ಸಂತೋಷ ಪೋಲೀಸರಿಗೆ. ಹಾಜರಿ ತಪ್ಪಿಸಿದ ಬಗ್ಗೆ ದುರಗಪ್ಪನಿಗೆ ಆರು ತಿಂಗಳ ಶಿಕ್ಷೆಯಾಯಿತು.

---

# ಅನಿಷ್ಟಕ್ಕೆ ಶನೀಶ್ವರ ಗುರಿ. ~ ~ ~

ಸಿರಿಪುರ

೮–೯–೨೬

ಮ॥ ರಾ॥ ಯವರಲ್ಲಿ ಶೀಲ ಮಾಡುವ ವಿಜ್ಞಾಪನೆಗಳು.

.... .... ....ನಿಮ್ಮ ಆಕ್ಷೇಪಣೆಯ ಪತ್ರವನ್ನು ಕಂಡು ಮನಸ್ಸಿಗೆ ಕಿರಿಕಿರಿಯಾದರೂ, ನಿಮ್ಮನ್ನು ನಾನು ಪ್ರೀತಿಸುತ್ತೇನಾಗಿ ಈ ಕಾಗದ ಬರೆಯುತ್ತೇನೆ. ಅಲ್ಲ, ನೀವು ಹೆಸರಿಗೆ ಹೆಂಡತಿಯೆಂದು ಮದುವೆಯಾಗಿ, ಹತ್ತಾರು ವರ್ಷ ಲಂಡನ್ನಿನಲ್ಲಿ ಹೋಗಿ ನಿಂತು, ಈಗ ನನ್ನನ್ನು ಆಡಿದರೆ ನನ್ನ ತಪ್ಪೆ? ನಾನೇನು ಮನುಷ್ಯಳಲ್ಲವೆ? ಇಷ್ಟಾಗಿ ಲಂಡನ್ನಿನಲ್ಲಿ ನೀವೇನೇನು ಮಾಡಿದ್ದೀರೊ ನನಗೆ ಗೊತ್ತೆ; ಅದೆಲ್ಲ ಈಗ ಬೇಡ.

ನೀವು ಊಹಿಸಿರುವುದು ಸರಿ. ಹೌದು. ಇ. ಶಿವರಾಯರು. ಇದೇ ಸಮಯದಲ್ಲಿ ನೀವು ಎರಡು ವರ್ಷದ ಹಿಂದೆ ಬರೆದ ಕಾಗದವನ್ನು ನಿಮಗೆ ನೆನಪು ಕೊಡುವುದು ಒಳ್ಳೆಯದು. ನನ್ನ ಸ್ನೇಹಿತೆ ಮಾಲುವು ಇದೇ ಇ. ಶಿವರಾಯರ ಜತೆಯಲ್ಲಿ ಒಂದು ವಾರ ಎಲ್ಲಿಯೋ ಹೋಗಿದ್ದಳೆಂದುದಕ್ಕೆ ನೀವೇನು ಬರೆದಿದ್ದಿರಿ, ನೆನಪಿದೆಯೆ? "ಇ. ಶಿವರಾಯರ ಜತೆಯಲ್ಲಿ ಯಾರು ಬೇಕಾದರೂ ಹೋದಾರು. ನಾನು ಹೆಂಗಸಾಗಿದ್ದಿದ್ದರೆ ನಾನೂ ಹೋಗುತ್ತಿದ್ದೆ"! ನಾನು ಆ ಕಾಗದವನ್ನು ಬಹಳವಾಗಿ ಓದಿ ಹಿಂದುಮುಂದು ನೋಡಿ ನಡೆದಿದ್ದೇನೆ. ನಾನೇನೂ ಓಡಿಹೋಗಿಲ್ಲ. ಈಗ ರತ್ನದಂತಹ ಒಂದು ಮಗುವಿದೆ. ಈಗ ಕೂಗಾಡಿದರೆ ಏನು ಬಂತು?

ಮುಂದೇನು ಮಾಡಬೇಕೆನ್ನುತ್ತೀರಿ? ಪ್ರಪಂಚಕ್ಕೆಲ್ಲ ಡಂಗುರ ಹೊಯ್ಯು ತ್ತೀರೇನು? ಏನು ಬಂದ ಹಾಗಾಯಿತು? ನಾನೆಲ್ಲೋ ನಮಗೆ ಬಿ. ಎ. ಗೆ ಇಟ್ಟಿದ್ದ ಪುಸ್ತಕದಲ್ಲಿ ಓದಿದ್ದೆ; "ಗಿಡದಲ್ಲಿ ಬಿಟ್ಟ ಹಣ್ಣು ಗಿಡವನ್ನು ಪಡೆದವನದಲ್ಲ; ಹಣ್ಣನ್ನು ಕಿತ್ತು ತಿನ್ನುವವನದು" ಎಂದು.

ಮುಖ್ಯ ನಾನು ಹೇಳುವುದಿಷ್ಟು; ನಾನೇನು ದೇವತೆಯಲ್ಲ, ಸಂನ್ಯಾಸಿನಿಯಲ್ಲ. ಈ ಸಿರಿಪುರ ಬಿಟ್ಟರೆ ಪ್ರಪಂಚದಲ್ಲಿ ಬೇರೆ ಊರೇ ಇಲ್ಲವೆನ್ನುತ್ತೀರೇನು?

ಎಲ್ಲವನ್ನೂ ಬರೆದಿದ್ದೇನೆ. ಸಾವಕಾಶವಾಗಿ ಯೋಚಿಸಿ ಕಾಗದ ಬರೆಯಿರಿ. ದುಡುಕಬೇಡಿ.

ಇತಿ ನಿಮ್ಮವಳಾದ
ಶೀಲ

* * * * *

ಸಿರಿಪುರ
೧೬–೫–೩೧

ತೀ॥ ರೂ ತಂದೆಯವರಲ್ಲಿ ಸುಬ್ಬನ ನಮಸ್ಕಾರಗಳು.

ಅದಾಗಿ ಉಭಯಕುಶಲೋಪರಿ ಸಂಪ್ರತಿ. ಇದ್ದ ಆಶೆಯು ನೆರಳೂ ಮರೆಯಾಯಿತು. ಗಂಗಮ್ಮನು ಇಂದು ಗಂಡುಕೂಸು ಹಡೆ ದಳು. ಈಗ ಹತ್ತು ತಿಂಗಳ ಹಿಂದೆ ನಮ್ಮ ರೇವಣ್ಣನು ಸತ್ತಾಗ, ಅವನ ಹೆಂಡತಿ ಗಂಗಮ್ಮನಿಗೆ ಮಕ್ಕಳಿಲ್ಲದ್ದರಿಂದ ಅವನ ಆಸ್ತಿ ನಮಗೆ ಬರಬೇ ಕಾಗಿತ್ತಲ್ಲವೆ! ಆದರೆ ಆಗ ಗಂಗಮ್ಮನು ತಾನು ಗರ್ಭಿಣಿಯೆಂದುದರಿಂದ ಕಾಲವನ್ನು ಕಾಯಬೇಕಾಯಿತು. ರೇವಣ್ಣನು ಹಾಸಿಗೆ ಹಿಡಿದು ಒಂದು ವರ್ಷದ ಮೇಲಾಗಿರುವಾಗ ಈ ಆಶ್ಚರ್ಯವು ಏನೆಂದು ನೀವು ಕೇಳ ಬಹುದು. ಅದರ ಗುಟ್ಟು ನನಗೆ ಗೊತ್ತು.

ರೇವಣ್ಣನು ಸತ್ತ ಮಾರನೆಯ ದಿನ, ಗಂಗಮ್ಮನೆದುರು ಸಿರಿಪುರದ ಅಮಲದಾರರು ಇ. ಶಿವರಾಯರು, ಇನ್ನೊಂದು ಹತ್ತು ತಿಂಗಳೊಳ ಗಾಗಿ ಅವಳಿಗೆ ಮಗುವಾದರೆ ಆಸ್ತಿಯು ಅವಳ ಕೈಬಿಟ್ಟು ಹೋಗುವು

ದಿಲ್ಲವೆಂದು ಹೇಳುತ್ತಿದ್ದುದನ್ನು ನಾನೇ ಕೇಳಿದೆ. ಇದಾದ ಕೆಲವು ರಾತ್ರಿಗಳು ಗಂಗಮ್ಮನು ಶಿವರಾಯರ ಮನೆಗೆ ಹೋಗುತ್ತಿದ್ದುದೂ ನನಗೆ ಗೊತ್ತು. ಆದರೇನು! ನಾವು ಬಾಯಿಬಿಡುವ ಹಾಗಿಲ್ಲ. ಈ ವಿಚಾರವನ್ನು ಹೊರಗೆಳೆದರೆ, ಸತ್ತ ರೇವಣ್ಣನ ಮಾನವೇನಾಯಿತು? ಅದರಿಂದ ನಮ್ಮ ಮಾನವೇನಾಯಿತು? ಮಾನವನ್ನು ಕಳಕೊಂಡು ಹಣ ಸಂಪಾದಿಸಬೇಕೆ? ಶಿವ ಕೊಟ್ಟ ಗಂಜಿಯೆ ಸಾಕು. ಅಲ್ಲದೆ ನಾವು ಬಡವರು. ಸಾಹೇಬರು ಶಿವರಾಯರ ಎದುರು ನಿಂತರೆ ನಮ್ಮನ್ನು ನಷ್ಟಿಮಾಡುವವರಾರು? ಈ ಎಲ್ಲ ಕಾರಣಗಳಿಂದ ನಮ್ಮ ಬಡತನವೇ ನಮಗೆ ಭಾಗ್ಯವೆಂದೂ, ಮಾಡಿದವರ ಪಾಪ ಆಡಿದವರ ಬಾಯಲ್ಲೆಂದೂ ನಾನು ಸುಮ್ಮನಿದ್ದರೆ, ನಾನು ಸರಿಯಾಗಿ ನಡೆದಿರುವೆನೆಂದಲ್ಲದೆ ತಾವು ಅನ್ಯಥಾ ಹೇಳಲಾರಿರೆಂದು ನಂಬುತ್ತೇನೆ. ಇದರ ಮೇಲೆ ತಾವು ಸೂಕ್ತಪದ್ದಂತೆ ಹಿತವಾದ ಬರೆಯುವುದು.

ಇಂತಿ ನಮಸ್ಕಾರಗಳು

ಸುಬ್ಬ

* * * * *

ಸಿರಿಪುರ

೧೯–೧೦–೩೨

ರಂಗಣ್ಣ,

ನಿನ್ನ ಕಾಗದ ಬಂತು. ನನಗೆ ಬಹಳ ಜಂಭ ಬಂದಿತು ಎನ್ನುತ್ತೀಯೆ. ಯಾವ ಮಹಾಪದವಿ ಬಂದಿರುವುದಕ್ಕೆ ಜಂಭ ಬರಬೇಕು? ಹೌದು. ನಾನು ಅಮಲದಾರರ ಹೆಡ್‌ಕ್ಲಾರ್ಕು. ಅರುವತ್ತು ರೂಪಾಯಿ ಸಂಬಳ ಬರುತ್ತೆ! ಆದರೆ, ರಂಗಣ್ಣ, ನನ್ನ ಪದವಿ ನನ್ನ ಶತ್ರುವಿಗೂ ಬೇಡ. ನಮ್ಮ ಅಮಲದಾರರ ಕಚೇರಿಯಲ್ಲಿ ಹೆಡ್‌ಕ್ಲಾರ್ಕ ಕೆಲಸ ಏನು ಗೊತ್ತೆ? ಮಿಕ್ಕ ಅಮಲದಾರರ ಹೆಡ್‌ಕ್ಲಾರ್ಕುಗಳು ಮಾಡುವ ಕೆಲಸಗಳಲ್ಲದೆ ಬೇರೆ ಇನ್ನೂ ಕೆಲಸ ಉಂಟು. ನೋಡು ನಮ್ಮ ಅಮಲದಾರರು ದಿನಕ್ಕೊಂದೊಂದು ಊರು ಜಮಾಬಂದಿಗೆ ಹೋಗುತ್ತಾರೆ. ಅವರು ಹೊರಡುವ ಹಿಂದಿನ ದಿವಸ ನಾನು ಹೋಗಬೇಕು. ಹೋಗು

ವಾಗ ಅವರ ಪೆಟ್ಟಿಗೆಯೊಂದನ್ನು ಹೊತ್ತುಕೊಂಡು ಹೋಗಬೇಕು. ಆ ಪೆಟ್ಟಿಗೆಯಲ್ಲೇನಿದೆ ಗೊತ್ತೆ, ರಂಗಣ್ಣ? ಒಂದು ಥಳಕಿನ ಸೀರೆ, ಕುಪ್ಪಸ, ಇಮಿಟೇಷನ್ ಒಡವೆ ಹತ್ತಾರು. ಒಂದು ಜತೆ ಸೆಂಟು ಬಾಟಲು. ನಾನು ಹೋಗಿ ಸರಿಯಾದ ಪಾತ್ರವನ್ನು ಆರಿಸಿ, ಮೈಕೈ ತೊಳೆಯಿಸಿ, ವೇಷಭೂಷಣಗಳನ್ನಳವಡಿಸಿ, ಅಮಲದಾರರು ಬರುವ ವೇಳೆಗೆ ಸಿದ್ಧಪಡಿಸಬೇಕು. ಒಂದು ಕಡೆ ನಗು ಬರುತ್ತವೆ, ಒಂದು ಕಡೆ ಅಳು ಬರುತ್ತದೆ, ರಂಗಣ್ಣ. ನನಗೆ ಏನಿಲ್ಲವೆಂದರೂ ತಿಂಗಳಿಗೆ ಇಪ್ಪತ್ತು ದಿವಸ ಈ ಕೆಲಸ ಇರುತ್ತದೆಂದರೆ, ನನ್ನ ಪದವಿಯಲ್ಲಿ ನನಗೆಷ್ಟು ಸಂಭವಿರಬೇಕು, ಹೇಳು! ವ್ಯವಧಾನವಿಲ್ಲದೆ ನಿನಗೆ ಕಾಗದ ಬರೆಯಲಿಲ್ಲವಲ್ಲದೆ ಬೇರೆಯಲ್ಲ,ರಂಗಣ್ಣ. ಇ. ಶಿವರಾಯರ ಹೆಸರನ್ನು ಕೇಳಿದ್ದೀಯಾ ನೀನು? ಕೇಳಿಲ್ಲದಿದ್ದರೆ ತಿಳಿದುಕೊ ರಂಗಣ್ಣ. ಅವರೆಯೆ ನಮ್ಮ ಸಾಹೇಬರು.

ಆದರೆ ನಾನೇಕೆ ಈ ಕೆಲಸ ಮಾಡುತ್ತೇನೆಂದು ನೀನು ಕೇಳಬಹುದು. ಒಂದು, ಅರವತ್ತು ರೂಪಾಯಿ ಬರುತ್ತೆ. ಎರಡು ಎಂತಹ ಕೆಲಸವಾದರೂ ಸರಿಯೆ, ನಾನೆಷ್ಟು ಅವನತಿಯನ್ನನುಭವಿಸಿದರೂ ಸರಿಯೆ, ತಾಯಿಲ್ಲದ ನನ್ನ ಮಗುವನ್ನು ಸುಖವಾಗಿರಿಸಬೇಕೆಂದು ಇಷ್ಟು ಒದ್ದಾಡುತ್ತಿದ್ದೇನೆ. ಸೋಮನಪೇಟೆಗೆ ಹೋಗಲು ಹೊತ್ತಾಯಿತು ರಂಗಣ್ಣ. ಪುನಃ ಬರೆಯುತ್ತೇನೆ.

ಶಾಮರಾವ್

* * * * *

ಸಿರಿಪುರ

೪–೬–೩೩

ರುಕ್ಕು,

ನಿನಗೆ ಕಾಗದ ಬರೆದು ಬಹಳ ಕಾಲವಾಯಿತಲ್ಲವೇನೆ, ಉಪ್ಪು ಹುಳಿ ಕಾರ ಇಲ್ಲದೆ ಅದೆಂತ ಕಾಗದ ಬರೆಯೋದೆ? ಈಗ ಅಂದರೆ, ಉಪ್ಪು, ಹುಳಿ, ಕಾರ, ಜತೆಗೆ ಒಗ್ಗರಣೇನೂ ಇದೆ. ಶಾಕೂಗೆ ಇನ್ನೊಂದು ಮಗು ಕಣೆ! ಹೆಣ್ಣು! ಶಾಕೂ ಯಾರು ಜ್ಞಾಪಕ ಇದೆಯೇನೆ? ಇ. ಶಿವರಾಯರ ಹೆಂಡತಿ. ಜ್ಞಾಪಕ ಇದೆಯೆ ರ್ಯಾಂಕಳರಲ್ಲಿ ಅವರಿಗೆ

ಮದುವೆ ಆದ್ದು! ಅಲ್ಲವೆ! ೧೯೧೬ರಿಂದ ೧೯೩೨ ಅಂದರೆ ೧೬ ವರ್ಷಕ್ಕೆ ೬ ಗಂಡು! ೮ ಹೆಣ್ಣು! ಅಬ್ಬ! ಶುದ್ಧ ಮೃಗಗಳು! ಲೇ ಸಮಾಚಾರ ಮುಗೀತು. ಈ ಸುದ್ದಿ ಕಾರ್ಡಿನಲ್ಲಿ ಬರೀಬಾರದು ಅಂತ ಕವರಿನಲ್ಲಿ ಬರೆದಿದ್ದೇನೆ. ಕವರಿಗೆ ಒಂದೂಕಾಲಾಣೆ ಕೊಡಬೇಕೂಂದರೆ ಹೊಟ್ಟೆ ಉರಿದುಹೋಗುತ್ತಮ್ಮ.

ಶಾಕೂಗೆ ಮಗು ಹುಟ್ಟಿದ್ದನ್ನು ಊರಲ್ಲಿ ಎಲ್ಲರಿಗೂ ಹೇಳು. ಮರೀ ಬೇಡ. ಅಯ್ಯೋ ಪಾಪ!

ಪಾತು

* * * * *

# ಸಿರಿಪುರದ ವಾರ್ತಾತರಂಗ

೨೫–೯–೩೬

## ದೈವಕ್ಕೆ ಕಣ್ಣಿಲ್ಲ

ನಮ್ಮ ಪತ್ರಿಕೆಯ ಘನಪೋಷಕರೂ, ಸಿರಿಪುರದ ಮಾನ್ಯ ಅಮಲ ದಾರರೂ ಆದ ಶ್ರೀಮಾನ್ ಇ. ಶಿವರಾಯರು ಈ ದಿನ ಬೆಳಿಗ್ಗೆ ೧೦ತ್ತಿ ಗಂಟೆಯಲ್ಲಿ ಪರಶಿವನ ಪಾದಧೂಳಿಯಲ್ಲಿ ಐಕ್ಯರಾಗಲು, ಕೈಲಾಸಗಿರಿವರದ ತುಂಗಶೃಂಗಗಳನ್ನು ಏರಿದರೆಂದು ತಿಳಿಸಲು ಬಹಳ ವಿಷಾದಪಡುತ್ತೇವೆ. ಶ್ರೀಯುತರು ತಮ್ಮ ಅಮಲದಾರಗಿರಿಯಲ್ಲಿ ಎಲ್ಲರ ಪ್ರೀತಿಯನ್ನೂ ಸಂಪಾದಿಸಿಕೊಂಡು ಪ್ರಜೆಗಳಿಗೆ ಅಚ್ಚುಮೆಚ್ಚಾಗಿದ್ದರು. ಇವರ ಅಕಾಲ ಮರಣದಿಂದ ಇಡೀ ಸಿರಿಪುರನೇ ಶೋಕಪಾಷಾಣದ ಕೆಳಗೆ ಸಿಕ್ಕಿ ಹೋಗಿದೆ. ಎಷ್ಟು ಹೇಳಿದರೇನು! ನಾವು ಹುಲುಮನುಜರು ಏನು ಮಾಡಲು ಸಾಧ್ಯ? ಎಲ್ಲವೂ ದೈವೇಚ್ಛೆ. ಮುಖ್ಯ ಆ ದೈವಕ್ಕೆ ಕಣ್ಣಿಲ್ಲ. ಆ ಪಾಪಿ ದೈವಕ್ಕೆ ಕಣ್ಣಿದ್ದಲ್ಲಿ ಶ್ರೀಯುತರ ಜೀವನಯಾತ್ರೆಯನ್ನು ಅವರ ೪೦ನೆಯ ವಯಸ್ಸಿನಲ್ಲಿಯೆ ಕೊನೆಗಾಣಿಸುತ್ತಿರಲಿಲ್ಲ. ಶ್ರೀಯುತರ ಪರಲೋಕ ಪ್ರಯಾಣಕ್ಕೆ ನಾವು ಕಣ್ಣೀರಿಡುತ್ತ, ಅವರ ಕುಟುಂಬದ ಅಪಾರವಾದ ದುಃಖಸಾಗರದಲ್ಲಿ ನಾವು ಭಾಗಿಗಳೆಂದು ಮಾತ್ರ ಹೇಳ ಬಲ್ಲೆವು.

# ನಾಲ್ಕನೇ ಹಕ್ಕು ೆ ೆ ೆ ೆ

## ಪರಿಚಯ

ಲಿಂಗಣ್ಣನ ಹೆಂಡತಿ ಸಾತವ್ವನು ಅಂದು ಹಾಗೆ ಮಾಡಿದುದು ತಪ್ಪೋ....? —ಎಂಬ ಯೋಚನೆಯು ಈಗ ಮೇಲಿಂದಮೇಲೆ ಬರುತ್ತದೆ. ಅವಳದೇನು ತಪ್ಪು....? —ಎಂಬ ಬಗೆಹರಿಯದ ಪ್ರಶ್ನೆಯೂ ಆಗಾಗ ಮನದ ಕಣ್ಣೆದುರು ಎದ್ದುನಿಲ್ಲುತ್ತದೆ.

ನಮ್ಮ ಊರ ಮುಂದಣ ತೋಟವನ್ನು, ಲಿಂಗಣ್ಣನೇ ಪಾಲಿಸಿಂದ ಮಾಡಿದ್ದನಾಗ. ಈ ತೋಟವು ನಮ್ಮ ಮನೆತನಕ್ಕೆ ಉಂಬಳಿಯಾಗಿ ದೊರೆತ ಸನದು ನಮ್ಮ ಮನೆಯಲ್ಲಿ ಇದುವರೆಗೂ ಇದೆ. ತಾಳಿಯು ಕೋಟೆಯು ಕಾಳೆಗದ ತರುವಾಯ ನಮ್ಮ ನಾಡು ವಿಧರ್ಮೀಯರ ಆಧೀನಕ್ಕೆ ಹೋಯಿತಲ್ಲವೇ? ಆಗ, ಮರಳಿ ಹಿಂದೂ ರಾಜ್ಯವನ್ನು ಸಂಸ್ಥಾಪಿಸಿ ಕಳೆದುಹೋದ ಸ್ವಾತಂತ್ರ್ಯವನ್ನು ಸಂಪಾದಿಸಬೇಕೆಂದು ಅಲ್ಲಲ್ಲಿ ಪ್ರಯತ್ನಗಳು ನಡೆದುವಂತೆ. ಇಂತಹ ಪ್ರಯತ್ನ ಮಾಡುವವರಲ್ಲಿ, ನಮ್ಮ ಪೂರ್ವಜರ ದಾಯಾದಿಯೊಬ್ಬನು ಮುಂದಾಳಾಗಿದ್ದನಂತೆ. ವಿಜಾಪುರದ ಬಾದಶಹನು ಆತನನ್ನು ಹಿಡಿದಿಡಬೇಕೆಂದು ಎಷ್ಟೆಷ್ಟೋ ಉಪಾಯಗಳನ್ನು ಮಾಡಿದನಂತೆ. ಆದರೂ ಆ ಸ್ವಾತಂತ್ರ್ಯಭಕ್ತನು ಸಿಕ್ಕಲಿಲ್ಲವೆಂತೆ. ಕೊನೆಗೆ ನಮ್ಮ ಮನೆತನದ ಮೂಲಪುರುಷನು ಮೋಸದಿಂದ—ಅಲ್ಲಲ್ಲ—ಯುಕ್ತಿ ಚಾತುರ್ಯಗಳಿಂದ ತಮ್ಮ ದಾಯಾದಿಯನ್ನು ಹಿಡಿದುಕೊಟ್ಟರಂತೆ. ಆ ಮಹತ್ಕಾರ್ಯಕ್ಕೆ ಪ್ರತಿಫಲವಾಗಿ, ಬಾದಶಹನು ಈ ತೋಟವನ್ನು ಸಿಕ್ಕಾವೋರ್ತಬಿನೊಂದಿಗೆ ಸನದು ಹಾಕಿ

ಕೊಟ್ಟಸಂತೆ. ಇದೆಲ್ಲವೂ ಆ ಸನದಿನಲ್ಲಿ ನೋಡಲಿಕ್ಕೆ ದೊರೆಯುತ್ತದೆ. ಇತಿಹಾಸ ಸಂಶೋಧಕರಾರಾದರೂ ಸನದನ್ನು ನೋಡಬೇಕೆಂದು ಅಪೇಕ್ಷೆಪಟ್ಟರೆ, ಅತ್ಯಗತ್ಯವಾಗಿ ತೋರಿಸುತ್ತೇನೆ. ಅವರು ತಮ್ಮ ಸಂಶೋಧನಪತ್ರಿಕೆಯಲ್ಲಿ, ನಮ್ಮ ಮನೆತನವು ಇತಿಹಾಸಪ್ರಸಿದ್ಧವಾದುದೆಂದು ಬರೆದು ಪ್ರಕಟಿಸಿದರೆ,ಅದೊಂದು ನನಗೆ ಹೆಮ್ಮೆಯ ವಿಷಯವೇ ಅಲ್ಲವೇ?

* * * * *

ಲಿಂಗಣ್ಣನು ಬಡವನೇ ಸರಿ. ಅದೇತಕ್ಕೆಂದರೆ, ಹೆಂಡತಿಮಕ್ಕಳೊಂದಿಗೆ —ವರುಷವೆಲ್ಲವೂ— ಮೈಮುರಿದು ದುಡಿದಾಗಲೆ ಆತನ ಕುಟುಂಬದ ಹೊಟ್ಟೆಗೆ ಹಿಟ್ಟು, ಮೈಗೆ ಬಟ್ಟೆ ದೊರೆಯುವುದು. ಲಿಂಗಣ್ಣನ ಆಸ್ತಿಯೆಂದರೆ ಇರುವ ಮುರುಕು ಮನೆಯೊಂದು; ಎರಡು ಎತ್ತುಗಳು; ಬೇಸಾಯಕ್ಕೆ ಬೇಕಾಗುವ ಕೆಲವು ಸಾಧನಗಳು; ಹಗ್ಗಕಣ್ಣಿಗಳು. ಇವೆಲ್ಲವುಗಳನ್ನೂ ಮೆಟ್ಟಿ ಮೀರುವ ಆಸ್ತಿಯೆಂದರೆ—ಆತನ ಮತ್ತು ಹೆಂಡತಿ ಮಕ್ಕಳ— ಬೇಸರವಿಲ್ಲದೆ ದುಡಿಯುತ್ತಲಿರುವ ಕಷ್ಟಸಹಿಷ್ಣುತೆಯು.

ಬೆಳುವಲನಾಡಿನ ಬೇಸಗೆಯ ತಾಪವನ್ನು ಅನುಭವಿಸಿಯೇ ಅರಿತು ಕೊಳ್ಳಬೇಕು. ಮಧ್ಯಾಹ್ನದ ಬಿಸಿಲಲ್ಲಿ, ನೀರು ಅಕ್ಕಿ ಬೆರಸಿ ಇಟ್ಟರೆ ಐದಾರು ನಿಮಿಷಗಳಲ್ಲಿ ಅನ್ನವಾಗಿಬಿಡಬಹುದು—ಅಷ್ಟೊಂದು ಬಿಸಿಲಿನ ಕಾವು. ಬಿಸಿನೀರಿನ ಸ್ನಾನವನ್ನು ಮಾಡಲು ಬಯಸುವವರು ಈ ಕಾಲದಲ್ಲಿ ಉರುವಲಿನ ವೆಚ್ಚವನ್ನು ಉಳಿಸಿಕೊಳ್ಳಬಹುದು. ಆದರೆ ಆಗ ಬಿಸಿನೀರನ್ನು ಬಯಸುವ ಮಹಾತ್ಮರಾದರೂ ಯಾರು ?

ಇಂತಹ ಉರಿಬೇಸಗೆಯ ಬಿರುಬಿಸಿಲಲ್ಲಿ ಲಿಂಗಣ್ಣನು ಬರಿಯ ಮೈಯಿಂದಲೆ ತೋಟದಲ್ಲಿ ಉಳುವ ಕೆಲಸ ಮಾಡುತ್ತಿದ್ದನು. ಉಂಡ ಅನ್ನವೂ ಕುಡಿದ ನೀರೂ ಬೆವರಿನ ರೂಪದಲ್ಲಿ ಮೈಯಿಂದ ಹೊರಬೀಳುತ್ತಿರುವುದಾಗ. ನಡುಬಾನಿಗೆ ಬಂದ ನೇಸರು ತನ್ನ ಕೆಂಡದ ಕಿರಣಗಳಿಂದ, ಲಿಂಗಣ್ಣನ ಮೈಯನ್ನು ಚುಚ್ಚಿ ಚುಚ್ಚಿ, ಕೊನೆಗೆ ತಾನೇ ಸೋತು ಕೀಳ್ಮೊಗನಾಗುವನು. ಸೂರ್ಯನು ಇಷ್ಟೊಂದು ತನಗೆ ವಿರೋಧಿಯಾಗಿ ನಡೆದುಕೊಂಡರೂ, ಲಿಂಗಣ್ಣನು ಪ್ರತಿದಿನವೂ ಬೆಳಗಿನ ಸೂರ್ಯನಿಗೆ ಭಕ್ತಿಯಿಂದ ಕೈಮುಗಿಯುವುದನ್ನು ಎಂದೂ ಬಿಡುತ್ತಿರ

ಲಿಲ್ಲ. ನನಗೆ ಒಂದೊಂದು ಸಲ ಹೀಗೂ ಎನಿಸುತ್ತಿದ್ದಿತು—ಸೂರ್ಯನು ಲಿಂಗಣ್ಣನ ಕರ್ಮಯೋಗಕ್ಕೆ ಮೆಚ್ಚಿ, ಆತನ ಕಡೆಗೆ ತನ್ನ ಅಮೃತ ಕಿರಣ ಗಳನ್ನಷ್ಟೇ ಕಳುಹಿಸುತ್ತಿರಬಹುದೇನೋ— ಎಂದು.

* * * * *

ಒಂದುಸಲ ಏನಾಯಿತೆಂದಿರಿ! ಪುನರ್ವಸು ನಕ್ಷತ್ರದ ಮಳೆಯು ವಿಪರೀತವಾಗಿ ಹತ್ತಿಬಿಟ್ಟಿದ್ದಿತು. ಮನೆಯಲ್ಲಿ ಗೌರಿಯ ಪೂಜೆಗಾಗಿ ಹೂವು, ಪತ್ರೆ ಬೇಕಾದುವು. ಮಳೆಯಲ್ಲಿ ತೋಟಕ್ಕೆ ಯಾರು ಹೋಗ ಬೇಕು ? ನಾನಾಗ ಚಿಕ್ಕವನು; ತಾಯಿ ನನಗೇ ಹೇಳಿದಳು. ಮಳೆಯಲ್ಲಿ ನಾನು ಹೋಗಲಾರೆನೆಂದು ಹಟಮಾಡಿದೆ. ತಾಯಿ ಏನೇನೋ ತಿಂಡಿಯ ಆಶೆಗಳನ್ನು ಹಚ್ಚಿದುದರಿಂದ —ಮನಸ್ಸಿಲ್ಲದಿದ್ದರೂ— ಕೊಡೆ ಹಿಡಿದು ಕೊಂಡು ತೋಟದ ಕಡೆಗೆ ಹೋದೆ.

ಲಿಂಗಣ್ಣನ ಹಿರಿಯ ಮಗನು ನನ್ನ ಸರಿವರಯದವನು. ನಾನು ತೋಟಕ್ಕೆ ಹೋದಾಗ ಆತನು ಬಾಳೆಯ ತೋಟದಲ್ಲಿ ಕುಳಿತು ಕಳೆ ಯನ್ನು ತೆಗೆಯುತ್ತಿದ್ದನು. ಮೇಲೆ ಏಕಪ್ರಕಾರವಾಗಿ ಸುರಿಯುತ್ತಿ ರುವ ಜಡಿಮಳೆ; ಕೆಳಕ್ಕೆ ಕಿಚಿಕಿಚಿಯಾದ ಕೆಸರು; ತೊಟ್ಟಿದ್ದ ಅರೆದೋಳಿನ ಅಂಗಿಯು ತೊಯ್ದು ತಪ್ಪಡಿಯಾಗಿದ್ದಿತು. ಚಳಿಯಿಂದ ನಡುಕ ಹಿಡಿದು ಹಲ್ಲುಗಳು ಬಾರಿಸುತ್ತಿದ್ದುವು. ಆದರೂ ಅವನು ತನ್ನ ಕಳೆ ಯನ್ನು ತೆಗೆಯುವ ಕೆಲಸ ನಡೆಯಿಸಿದ್ದ. ನಾನು ಕೇಳಿದೆ.

"ಏನೋ ಇದು ? ಮಳೆಯಲ್ಲಿಯೇ ಕೆಲಸ ಮಾಡುತ್ತಿದ್ದೀ ಯಲ್ಲಾ ?"

ಲಿಂಗಣ್ಣನ ಮಗನು ವಿನಯದಿಂದ ಹೇಳಿದ.

"ಮಾಡದಿದ್ದರ ಹ್ಯಾಂಗ ನಡದೀತು ರಾಯರs! ಮಳೀ ಒಂದs ಸವನs ಹೊಡೀಲಾಕ ಹತ್ತೈತ್ರಿ. ಈಗ ಹಾಂಗs ಬಿಟ್ಟರ, ಯಾಡ್ಡ ದಿನದಾಗ ತ್ವಾಟದ ತುಂಬ ಕಸಾ ಬೆಳೀತೈತ್ರಿ. ಅಂತs ಈಗ ಬೇಗ್ಗೆದ್ದ ವನs ಬಂದು ಬಿಟ್ಟೇನಿ."

ನಾನು ಯಾವ ಯೋಚನೆಯೂ ಇಲ್ಲದೆ ಹೂಗಳನ್ನು ತೆಗೆಯಲು ತೊಡಗಿದೆ. ಲಿಂಗಣ್ಣನ ಮಗನು ಮಾತನಾಡಿದ.

"ರಾಯರಽ! ಅಪ್ಪನವರಿಗೆ ಹೇಳಿ, ಉರೀಗೆ ಔಸಽದಾ ಕೊಡಸರೀ!"

"ಉರಿಯ ಔಷಧ ಯಾರಿಗೋ?"

"ನನಗಽನ್ರೀ! ನಾಕೈದು ದಿನಾ ಆತು. ಉರಿ ಚಳಿ ಬರಲಾಕ ಹತ್ತೈತ್ರಿ. ನಿನ್ನೆ ರಾತ್ರೀ ಉರೀ ಬಂದು ಬಿದ್ದರಽ ಮೈಮ್ಯಾಗ ಎಚ್ಚರ ಕೂಡಾ ಇದ್ದಿದ್ದಿಲ್ಲ ನೋಡ್ರಿ!"

ನನಗೆ ಆಶ್ಚರ್ಯವಾಯಿತು. ಒಮ್ಮೆಲೆ ಕೇಳಿದೆನು.

"ನಿನ್ನೆ ರಾತ್ರಿಯಲ್ಲಿ ಜ್ವರ ಬಂದಿದ್ದವನು ಈಗ ಮಳೆಯಲ್ಲಿ ಕೆಲಸಕ್ಕೆ ಬಂದಿದ್ದೀಯೆ?"

"ಏನ ಮಾಡೂದಽತಿ ರಾಯರಽ! ನಿವಾರ್ ಇಲ್ಲದಮ್ಯಾಗ ಮಾಡಲಾಕಽ ಬೇಕಲ್ರಿ. ನಿಮ್ಹಾಂಗ ನಾವೇನು ಸಿರಿಮಂತರ ಮಕ್ಕಳಽ? ಉರೀ ಬರಲಿ, ಚಳೀ ಬರಲಿ; ಮೈಮುರಿ ದುಡದಾಗಽ ಒಂದ ರೊಟ್ಟಿ ತಿನ್ನಾಕ ಸಿಗತಯ್ತ್ರಿ!"

'ಪಾಪ! ತಾಯಿಯವರಿಂದ ಔಷಧ ಕೊಡಿಸಬೇಕು' ಎಂಬ ಮರುಕವುಂಟಾಯಿತು. ಆ ಮರುಕದ ಕ್ಷಣದಲ್ಲಿ ಔಷಧ ಕೊಡಿಸುವೆನೆಂದು ಲಿಂಗಣ್ಣನ ಮಗನಿಗೆ ಹೇಳಿಯೂ ಬಿಟ್ಟೆ. ಮನೆಗೆ ಬಂದ ಮೇಲೆ ಹಬ್ಬದ ಗಲಾಟೆಯಲ್ಲಿ ಔಷಧಿಯ ವಿಚಾರವು ಮರವೆಯಾಗಿಬಿಟ್ಟಿತು. ಲಿಂಗಣ್ಣನ ಮಗನೂ ಮತ್ತೊಮ್ಮೆ ನೆನಪು ಮಾಡಲಿಲ್ಲ.

* * * * *

ಸಂಜೆಯ ಕಡೆಗೆ ನಾನು ಹೋದಾಗಲೆಲ್ಲ ಲಿಂಗಣ್ಣನು ಮೊಟ್ಟೆ ಹೂಡಿರುತ್ತಿದ್ದನು. ಸಾತಮ್ಮನು ತನ್ನ ಎಳಗೂಸನ್ನು ಗುಡಿಸಲಲ್ಲಿ ಮಲಗಿಸಿ, ಬೆಳೆಗಳಿಗೆ ನೀರು ಹಾಯಿಸುತ್ತಿರುವಳು. ಕೂಸು ನಿದ್ದೆಯಿಂದ ಎಚ್ಚತ್ತು —ಗುಡಿಸಲ ಕಂಡಿಗಳೊಳಗಿನ— ಸಂಜೆಯ ಸೂರ್ಯನ

ಚೆಂಬೆಳಕನ್ನು ನೋಡುತ್ತ —ಆಟವಾಡುತ್ತ ಬಿದ್ದುಕೊಂಡಿರುವುದು. ನಾನು ಯಾತದ ಮೇಲೆ ನೀರಹರಿಯಲ್ಲಿ ಕಾಲುಗಳನ್ನು ಬಿಟ್ಟುಕೊಂಡು ಕುಳಿತು ಆಟವಾಡುತಲಿರುವೆನು. ಸಂಜೆಯ ಶಾಂತವಾದ ವೇಳೆ; ನೀರಿನ ಮೊಟ್ಟೆಯು ಮೇಲಕ್ಕೇರಿ ಒಂದು ಹರಿಯಲ್ಲಿ ಸುರಿಯುತ್ತಿರುವಾಗ, ಮೇಲೆ ಹಾರುತ್ತಿರುವ ತುಷಾರ ಮಂಡಲದ ಮೇಲೆ, ಹೊಂಬಿಸಿಲು ಅಂದ ವಾದ ಚಿತ್ರಗಳನ್ನು ಬರೆಯುತ್ತಿರುವುದು. ತೋಟದ ಬೇಲಿಯಿಂದ ಹೊರ ಡುತ್ತಿರುವ ಶ್ಯಾಮಲಚ್ಛಾಯೆಯು ಮೇಲುಮೊಗವಾಗಿ ನಡೆದಿರುವುದು. ಆಗ ಲಿಂಗಣ್ಣನು, ತನ್ನ ಬಾಳಿನ ತಿರುಳು ತುಂಬಿದ ತುಂಡುಹಾಡು ಗಳನ್ನು ರಾಗ ಎಳೆದೆಳೆದು ಹೇಳುತ್ತಿರುವನು. ನಾನಾಗ ಚಿಕ್ಕವನಾಗಿ ದ್ದರೂ ಇಂತಹ ಸಂಜೆಯ ಸುಖಸಮಯಗಳನ್ನು ಆಗಾಗ ಬಯಸು ತ್ತಿದ್ದೆನು. ಎಂತಲೇ ದಿನದಿನವೂ ತಪ್ಪದೆ ತೋಟಕ್ಕೆ ಹೋಗುತ್ತಿದ್ದೆನು.

* * * * *

ಒಂದುಸಲ ನಮ್ಮ ಮನೆಯವರೆಲ್ಲರೂ ಸೇರಿ ತೋಟವನ್ನು ನೋಡಲಿಕ್ಕೆಂದು ಹೋಗಿದ್ದೆವು. ಲಿಂಗಣ್ಣನ ಮನೆಯವರಿಗೆಲ್ಲ ಅದೆಷ್ಟು ಸಂತೋಷ! ಸಾತಮ್ಮನು ತನ್ನ ಎಳಗೂಸನ್ನೂ ಕೆಳಕ್ಕಿಟ್ಟು ನಮ್ಮ ಚಿಕ್ಕತಂಗಿಯನ್ನು ಕಂಕುಳಲ್ಲೆತ್ತಿಕೊಂಡಳು. ಅದೆಷ್ಟೋ ಪ್ರೀತಿಯನ್ನು ತೋರಿಸುತ್ತ ತೋಟದಲ್ಲೆಲ್ಲ ತಿರುಗಾಡಿದಳು. ಬಳಿಕ ನಮ್ಮೆಲ್ಲರದೂ ತಿಂಡಿತಿನಿಸಿನ ಸಂಭ್ರಮವು ಆಯಿತು. ಮನೆಗೆ ಮರಳಿ ಬಂದಾಗ ಆರು ಗಂಟೆಯಾಗಿದ್ದಿತು. ಮನೆಗೆ ಬಂದ ನಾಲ್ಕಾರು ನಿಮಿಷಗಳಲ್ಲಿಯೇ ಚಿಕ್ಕತಂಗಿಯ ಒಂದು ಕೈಯಲ್ಲಿಯ ಚಿನ್ನದ ಬಳೆಯು ಇಲ್ಲದಂತಾದುದು ಗೊತ್ತಾಯಿತು. ಸಾತಮ್ಮ ತಂಗಿಯನ್ನೆತ್ತಿಕೊಂಡು ಸುತ್ತಾಡಿದುದು ಎಲ್ಲರಿಗೂ ಗೊತ್ತು. ಮನೆಯವರೆಲ್ಲರೂ ಅವಳ ಮೇಲೆಯೇ ಸಂಶಯ ವನ್ನು ವ್ಯಕ್ತಪಡಿಸಿದರು. ತಂದೆಯವರು ಮತ್ತೊಮ್ಮೆ ತೋಟಕ್ಕೆ ಹೋಗಿ ನೋಡಿಕೊಂಡು ಬರಬೇಕೆಂಬ ವಿಚಾರದಲ್ಲಿದ್ದರು. ಅಷ್ಟರಲ್ಲಿಯೆ ಸಾತಮ್ಮನು ಆತುರದ ನಡಿಗೆಯಲ್ಲಿ ನಡೆಯುತ್ತ ಅಲ್ಲಿಗೆ ಬಂದಳು. ಬಂದ ವಳೇ ಕೈಯಲ್ಲಿದ್ದ ಚಿನ್ನದ ಬಳೆಯನ್ನು ತಾಯಿಯ ಎದುರಿಗಿಟ್ಟು ಹೇಳಿದಳು.

“ಬಾವೀ ಕಟ್ಟೀವ್ಯಾಗ ನೀವೆಲ್ಲಾರೂ ಕುಂತಿದ್ರೆಲ್ಲಾ! ಅಲ್ಲೇ ಈ ಬಳೀ ಬಿದ್ದಿತ್ತು ಯವ್ವಾ! ನಾ ಬುತ್ತೀ ಅರವೀ ತೋಸಿಕೊಂಡು ಬರಬೇಕೂ ಅಂತ ಹೋಗೂದಕ್ಕ ಇದು ನನ್ನ ಕಣ್ಣಿಗೆ ಬಿತ್ತು. ಲಗೂನ ಹೋಗಿ ಅವರದವರಿಗೆ ಕೊಟ್ಟು ಬಾ; ಮುನ್ಯಾಗ ಹುಡಿಕ್ಯಾಡಲಾಕ ಹತ್ತಿದ್ದಾರಾದೀತು—ಅಂತ ಅಂವಾ ಹೇಳಿದ ಅದಕ್ಕ ನಾ ಓಡತೋಡತ ಬಂದೆ.”

ನಮ್ಮ ಮನೆಯವರೆಲ್ಲರೂ ಒಂದೊಂದು ಒಳ್ಳೆಯ ಮಾತನಾಡಿ, ಸಾತಮ್ಮನ ಮನಸನ್ನು ತಣಿಸಿದರು. ಅವಳು ತಾನಾಗಿಯೇ ಚಿಕ್ಕ ತಂಗಿಯ ಕೈಗೆ ಆ ಬಳೆಯನ್ನಿಡಿಸಿ, ಪ್ರೀತಿಯಿಂದ ಎತ್ತಿಕೊಂಡು ಮುತ್ತಿಟ್ಟು ಕಳಕ್ಕಳಿಸಿದಳು. ಆಗ ಸಾತಮ್ಮನಿಗೆ ನೂರು ಯಜ್ಞ ಮಾಡಿದಂತಹ ಸಮಾಧಾನವುಂಟಾಗಿರಬಹುದು.

* * * * *

ತೋಟದಲ್ಲಿ ರಾಶಿರಾಶಿಯಾಗಿ ಕಾಯಿಪಲ್ಲೆ ಬೆಳೆಯುತ್ತಿದ್ದಿತು! ನಮ್ಮ ಮನೆಗೆ ಅದರ ಉಪಯೋಗ ಬೇಕಾದಷ್ಟು ಆಗುತ್ತಿದ್ದಿತು. ಲಿಂಗಣ್ಣನ ಮನೆಯವರ ಊಟವನ್ನು ನಾನು ಎಷ್ಟೋಸಲ ನೋಡಿದ್ದೆನಲಾ' ಜೋಳದರೊಟ್ಟಿ, ಸುಚ್ಚು, ಕಾರ, ಈರುಳ್ಳಿ ಇವಿಷ್ಟೇ! ಕಾಯಿಪಲ್ಲೆಗಳ ಮಾರಾಟದಿಂದ ನಡುನಡುವೆ ದುಡ್ಡೇನಾದರೂ ಬಂದರೆ, 'ಗೊಬ್ಬರಕ್ಕೆ ಬೇಕು' 'ಬಿತ್ತುವ ಬೀಜಕ್ಕೆ ಬೇಕು' 'ಎತ್ತಿನ ಹೊಟ್ಟೆಯ ಕಾಳಿಗೆ ಬೇಕು. 'ಮೊಟ್ಟೆಯ ಚರ್ಮಕ್ಕೆ ಬೇಕು' ಎಂದು ಗಂಟು ಹಾಕಿಹಾಕಿ ಇಡುವುದರಲ್ಲಿಯೇ ಲಿಂಗಣ್ಣನಿಗೆ, ಸಾತಮ್ಮನಿಗೆ ಸಮಾಧಾನ. ಬಾದಶಹನಿಗೆ ಸಹಾಯಮಾಡಿ, ನಮ್ಮ ಪೂರ್ವಜರು ಪಡೆದ ಭೂಮಿಗೆ ನಾವಿಂದು ಒಡೆಯರಾಗಿ, ಕೈ ಕೆಸರು ಮಾಡಿಕೊಳ್ಳದೆ ಕುಳಿತಲ್ಲಿಯೇ ಮೊಸರನ್ನವನ್ನು ಉಣ್ಣುತ್ತಿದ್ದೆವು; ಅಲ್ಲದೆ ಲಿಂಗಣ್ಣನು ನಮ್ಮ ಸೇವಕನೆಂಬ ಕೀಳ್ನೋಟಕ್ಕೆ—ನಮ್ಮೆಲ್ಲರ ಹೃದಯದಲ್ಲಿಯೂ— ಇಂಬುಗೊಟ್ಟಿದ್ದೆವು!

## ಪರಿಣಾಮ

ಬಾಳೆಯ ತೋಟವು ಹಳೆಯದಾದುದರಿಂದ, ಹೊಸನೆಲದಲ್ಲಿ ಮರಿಗಳನ್ನು ನೆಡಬೇಕೆಂಬ ವಿಚಾರವು ನಡೆಯಿತು. ಲಿಂಗಣ್ಣನೊಡನೆ ಮುಂ

ದಿನ ಹತ್ತು ವರ್ಷಗಳ ಗೇಣಿಯ ಬಗೆಗೆ ಮಾತುಕತೆಯೂ ಆಗಿಬಿಟ್ಟಿತು. ಹೊಸನೆಲಕ್ಕೆ ಹೆಚ್ಚಾಗಿ ಗೊಬ್ಬರ ಬೇಕಾಯಿತು. ಲಿಂಗಣ್ಣನು ಕೂಡಿ ಸಿಟ್ಟಿದ್ದ ಹಣವು ಅರ್ಧಕ್ಕೂ ಸಾಲಲಿಲ್ಲ. ಹೆಚ್ಚಿನ ಗೊಬ್ಬರಕ್ಕಾಗಿ ಅವನು ಸಾವುಕಾರರಲ್ಲಿ ಬಡ್ಡಿಯಿಂದ ಸಾಲತೆಗೆಯಬೇಕಾಯಿತು. ಲಿಂಗಣ್ಣನು ಕಷ್ಟಪಟ್ಟು ಉತ್ತು, ಕುಣಿಗಳನ್ನು ಅಗಿದು, ಮರಿಗಳನ್ನು ನೆಟ್ಟು, ಹೊಸ ತೋಟವನ್ನು ಮಾಡಿದನು. ಅದರ ಭವಿಷ್ಯತ್ ಕಾಲದ ಫಲಪ್ರಾಪ್ತಿಯನ್ನು ಎಣಿಕೆ ಹಾಕುತ್ತ ಮನಸಿನಲ್ಲಿ ಹಿರಿಹಿರಿ ಹಿಗ್ಗುತ್ತಿದ್ದನು.

ಶ್ರಾವಣದ ಕೊನೆಯ ಸೋಮವಾರಕ್ಕೆ ನಮ್ಮೂರ ಸಂಗನಬಸವಣ್ಣನ ಜಾತ್ರೆ. ಊರಲ್ಲಿ ಎಲ್ಲೆಲ್ಲಿಯೂ ಜಾತ್ರೆಯ ಸಿದ್ಧತೆಯ ಉತ್ಸಾಹವು ಪ್ರವಹಿಸತೊಡಗಿತು. ಜಾತ್ರೆಯ ದಿನ ಹೊಸ ಬಟ್ಟೆಗಳನ್ನು ಧರಿಸಿದ ಒಕ್ಕಲಿಗರ ಮಕ್ಕಳು, ದಿಲ್ಲೀಶ್ವರನ ರಾಜವಸ್ತ್ರಗಳು ದೊರೆತಾಗಿನಷ್ಟು ತೃಪ್ತಿಪಟ್ಟುಕೊಂಡು ಇರುತ್ತಾರೆ. ಎಂತಲೇ ನಮ್ಮ ಹಳ್ಳಿಯ ಚಿಪ್ಪಿಗನ ಮನೆಯಲ್ಲಿ ಹೊಸಬಟ್ಟೆಗಳು ರಾಶಿರಾಶಿಯಾಗಿ ಬಿದ್ದಿರುವುವು. ರೈಲ್ವೆಸ್ಟೇಶನ್ನಿನಲ್ಲಿ ಟಿಕೆಟ್ಟಿಗಾಗಿ ಆತುರರಾಗಿ ನಿಂತ ಪ್ರಯಾಣಿಕರ ಹಾಗೆ –ಚಿಪ್ಪಿಗರ ಮನೆಯ ಬಾಗಿಲಲ್ಲಿ 'ನನ್ನದು ಮೊದಲು, ನನ್ನದು ಮೊದಲು' ಎಂದು ಆತುರಪಡಿಸುತ್ತ—ಹುಡುಗರ ನೆರವಿ ನಿಂತಿರುವುದು.

ಲಿಂಗಣ್ಣನ ಮಕ್ಕಳೂ ಜಾತ್ರೆಯ ಹೊಸಬಟ್ಟೆಗಾಗಿ ಕಾಡಲು ತೊಡಗಿದರು; ಆದರೆ ಕೈಯಲ್ಲಿ ಒಂದು ಕಾಸೂ ಇರಲಿಲ್ಲ–ಇಷ್ಟೇ ಅಲ್ಲ; ಲಿಂಗಣ್ಣನ ತಲೆಯ ಮೇಲೆ —ಗೊಬ್ಬರಕ್ಕಾಗಿ ಮಾಡಿದ್ದ— ಸಾಲದ ಹೊರೆಯಿದ್ದಿತು. ಅವನು ಮಕ್ಕಳ ಬಯಕೆಯನ್ನು ಈಡೇರಿಸಲಾರದವನಾಗಿ ಒಳಗೊಳಗೆಯೆ ಕಳವಳಪಡುತ್ತಿದ್ದನು. ಸಾತಮ್ಮನ ಮನಸ್ಸಂತೂ ಹೊಗೆಯಮನೆಯಲ್ಲಿ ಸಿಕ್ಕು ಉಸಿರುಗಟ್ಟಿದವರಂತಾಗಿರಬಹುದು. ವರುಷಕ್ಕೊಂದು ಸಲ ಬರುವ ಜಾತ್ರೆ; ಅಂದು ತನ್ನ ಮಕ್ಕಳಿಗೆ ಉಡುತೊಡುವುದಕ್ಕೆ ಹೊಸಬಟ್ಟೆಗಳನ್ನು ಒದವಿಸಿಕೊಡುವ ಯೋಗ್ಯತೆ ತನಗಿಲ್ಲದುದನ್ನು ಕಂಡು ಅವಳು ಎಷ್ಟೊಂದು ವ್ಯಥೆಗೊಂಡಿರಬೇಡ ?

ಜಾತ್ರೆಯ ಸಂತೆಗೆಂದು ಊರಿಗೆ ಊರೇ ನೆರೆಯೂರಿಗೆ ಹೋಯಿತು. ಸಾತಮ್ಮನೂ ಹೋಗಿರುವಳೆಂಬುದು, ನಾನು ಸಂಜೆಯ

ಕಡೆಗೆ ತೋಟಕ್ಕೆ ಹೋದಾಗ ಗೊತ್ತಾಯಿತು. ತಮ್ಮ ತಾಯಿ ನಾಳೆಗೆ ಜಾತ್ರೆಗಾಗಿ ಹೊಸಬಟ್ಟೆ ತರುತ್ತಾಳೆಂದು, ಲಿಂಗಣ್ಣನ ಮಕ್ಕಳೆಲ್ಲರೂ ಉಬ್ಬಿ ಉಬ್ಬಿ ಕುಣಿದಾಡುತ್ತ ನನಗೆ ಹೇಳಿದರು.

* * * * *

ಮರುದಿನ ಹಗಲು ನಾಲ್ಕುಗಂಟೆಯಾಗಿರಬಹುದು. ಬಾಡಿಗೆಯ ಬಂಡಿಯ ಬಸಪ್ಪನು —ತನ್ನ ದುಡ್ಡು ಕೇಳಲಿಕ್ಕೆ ಇರಬಹುದು—ನಮ್ಮ ತಂದೆಯ ಕಡೆಗೆ ಬಂದಿದ್ದನು ಮಾತಿಗೆ ಮಾತು ಹೊರಟು ಅವನು ಕೇಳಿದನು.

“ನಿನ್ನಿನ ಬಾಳೀಗೊನಿಗೆ ಎಷ್ಟು ಹಣಾ ಬಂತು ರಾಯರs!”

ತಂದೆ ಆತುರಭಾವದವರಾಗಿ ಕೇಳಿದರು.

“ಎಲ್ಲಿಯ ಬಾಳೆಯಗೊನೆಗಳೋ ಬಸಪ್ಪಾ?”

“ಸಾತಮ್ಮ ನಿನ್ನೆ ಸಂತಿಗೆ ನಾಕ ಗೊನೀ ತಗೊಂಡು ಬಂದಿದ್ದಳಲ್ರಿ; ಅವು?”

“ಸಾತಮ್ಮ ನಿನ್ನೆ ಸಂತೆಗೆ ತೆಗೆದುಕೊಂಡು ಬಂದಿದ್ದಳೇ?”

“ನಿಮಗ ಗೊತ್ತ್ಯs ಇಲ್ಲೇನ್ರಿ? ನನ್ನ ಬಂಡೀವ್ಯಾಗs ಇಟ್ಟಿದ್ದಳಲ್ರಿ ಹೋಗೂವಾಗ!”

“ನನಗೆ ಗೊತ್ತೇ ಇಲ್ಲ ಬಿಡು. ಲಿಂಗ ನನಗೆ ಹೇಳದೆ ಎಂದೂ ಕಾಯಿ ಕೊಯ್ಯುತ್ತಿರುವುದಿಲ್ಲವೋ ಬಸಪ್ಪಾ!”

“ಏನ್ರೀ, ನಾ ಏನ ಸುಳ್ಳs ಹೇಳತೀನೇನ? ಯಿಚಾರ ಮಾಡಿ ನೋಡ್ರಿ ಬೇಕಾದರ!”

ಬಸಪ್ಪ ಇಷ್ಟು ಮಾತನಾಡಿ ತನ್ನ ಹಣ ತೆಗೆದುಕೊಂಡು ಹೊರಟು ಹೋದ. ನಮ್ಮ ತಂದೆಯವರದು ವಿಚಿತ್ರವಾದ ಸ್ವಭಾವ. ಬಸಪ್ಪನ ಮಾತಿನಿಂದ ಅವರು ತುಂಬ ಕೋಪಗೊಂಡಿದ್ದಂತೆ ಕಂಡಿತು. ಆಳು ಮನೆಯಲ್ಲಿ ಇರಲಿಲ್ಲವಾದುದರಿಂದ ನನ್ನನ್ನು ಕೂಗಿ ಕರೆದು, ಗಡುಸಾದ ನುಡಿಯಲ್ಲಿ ಹೇಳಿದರು.

"ನೀನು ಹೀಗೆಯೇ ಹೋಗಿ ಲಿಂಗನನ್ನು ಕರೆದುಕೊಂಡು ಬಾ!"

ನಾನು ಹುಲ್ಲೆಯ ನೆಗೆತದಿಂದ ಹಾರುತ್ತ ಹೋಗಿ ಲಿಂಗಣ್ಣನನ್ನು ಕರೆದೆ. ಆತನನ್ನೊಡಗೊಂಡು ತಂದೆಯ ಬಳಿಗೆ ಬಂದೆ. ತಂದೆಯವರು ಮುಖ ಗಂಟುಹಾಕಿಕೊಂಡೇ ಕುಳಿತಿದ್ದರು. ಲಿಂಗಣ್ಣನು ಬಂದೊಡನೆಯೆ ಸಿಡಿನುಡಿಯಲ್ಲಿ ಕೇಳಿದರು.

"ಏನಪ್ಪಾ ಲಿಂಗಾ! ನಿನ್ನೆ ಸಂತೆಗೆ ಬಾಳೆಯಗೊನೆ ಎಷ್ಟು ಕಳುಹಿಸಿಕೊಟ್ಟಿದ್ದೆ?"

ಲಿಂಗಣ್ಣನು ಗಾಬರಿಯ ದನಿಯಲ್ಲಿ ಕೇಳಿದ.

"ಎಲ್ಲೀದ್ರೀ ಯಪ್ಪಾ! ಗೊನೀ ಕೊಯ್ಯೋದಾದ್ರು ನಿಮಗ ಹೇಳದs ಕೊಯ್ತೀನೇನ್ರಿ?"

"ನಿನ್ನೆ ನಿನ್ನ ಹೆಂಡತಿ ನಾಲ್ಕುಗೊನೆಗಳನ್ನು ತೆಗೆದುಕೊಂಡು ಹೋಗಿರಲಿಲ್ಲವೇ?"

ಲಿಂಗಣ್ಣನು ಏನೂ ತಿಳಿಯದವನಾಗಿ ಸುಮ್ಮನೆ ಕುಳಿತ. ಮತ್ತೆ ತಂದೆ ಮಾತನಾಡಿದರು.

"ಸುಳ್ಳು ಹೇಳಬೇಡ; ನನಗೆಲ್ಲವೂ ಗೊತ್ತಾಗಿದೆ. ಸಂಭಾವಿತನೆಂದು ನಿನ್ನ ಮೇಲೆ ನಂಬುಗೆಯನ್ನಿಟ್ಟರೆ, ಒಳ್ಳೆಯ ಕೈತೋರಿಸುತ್ತಿದ್ದೀಯೆ........ ಹೇಳು! ನಿಜ ಹೇಳು....! ಕಳುಹಿಸಿದ್ದೆಯೋ ಇಲ್ಲವೋ?"

"ಸಂಗನಬಸವಣ್ಣನ ಆಣೆಂದರೂ ನನಗ ಗೊತ್ತಿಲ್ಲ ರಾಯರs!"

"ಗೊತ್ತಿಲ್ಲವೇ? ಹಾಗೆಯೆ ಹೇಗೆ ಗೊತ್ತಾದೀತು? ಬೆನ್ನಮೇಲೆ ಬಾರುಕೋಲಿನೇಟು ಬಿದ್ದಾಗ ಗೊತ್ತಾಗುತ್ತದೆ—ಅಲ್ಲವೇ?"

ಲಿಂಗಣ್ಣನ ಕಣ್ಣುಗಳಿಂದ ನೀರುಗಳು ಹರಿದುವು. ಧ್ವನಿಯು ನಡುಕವನ್ನು ಪಡೆಯಿತು. ಕುಗ್ಗಿದ ದನಿಯಲ್ಲಿ ತಡೆಯುತ್ತ ಹೇಳಿದನು.

"ಸತ್ಯಾ ಸೂರಿಸಿ ಹೇಳತೀನು ನನ್ನ ಒಡ್ಯಾ! ನನಗೇನೂ ಗೊತ್ತಿಲ್ಲ. ಬೇಕಾದರ ಆಕಿನ್ನ ಇಲ್ಲೇ ಕರಿಸಿ, ಸುಳ್ಳು ಖರೆ ಯಿಚಾರಾ ಮಾಡಿಬಿಡ್ರಿ!"

ಸಾತಮ್ಮನನ್ನು ಕರೆದು ತರುವಂತೆ ತಂದೆಯುವರ ಆಜ್ಞೆಯಾಯಿತು. ಕೂಡಲೆ ಓಡಿದೆ; ತಂದೆಯುವರು ಕರೆಯುತ್ತಾರೆಂದು ಸಾತಮ್ಮನಿಗೆ ಹೇಳಿದೆ. ಒಡನೆಯೆ ಆಕೆಯ ಮುಖವು ಕಪ್ಪಿಟ್ಟಿತು. ಎದೆಯು ದಡ-ದಡಿಸುತ್ತಿರುವಂತೆ ತೋರಿತು. ಎಳೆದೆಳೆದು ಹೆಜ್ಜೆಗಳನ್ನು ಹಾಕುತ್ತ ನನ್ನೊಡನೆ ಮನೆಗೆ ಬಂದಳು. ಲಿಂಗಣ್ಣನ ದೈನ್ಯಭಾವದ ಮುಖವನ್ನೂ ನಮ್ಮ ತಂದೆಯುವರ ಕ್ರೋಧಭಾವದ ಮುಖವನ್ನೂ ಕಂಡು, ಸಾತಮ್ಮನು ಗಡಗಡನೆ ನಡುಗಿರಬಹುದು. ಬಂದವಳು ಲಿಂಗಣ್ಣನ ಹಿಂಬದಿಗೆ ಮುಖ ತಗ್ಗಿಸಿ ಕುಳಿತುಕೊಂಡಳು. ತಂದೆಯುವರ ಗುಡುಗೊಂದು ಕೇಳಿಸಿತು.

“ಏನವ್ವಾ! ನಿನ್ನ ಸಂತೆಗೆ ನೀನು ಬಾಳೆಯಗೊನೆಗಳನ್ನೆಷ್ಟು ಒಯ್ದಿದ್ದೆ?” ಸಾತಮ್ಮನು ಬೆದರಿದ ಬಗೆಯವಳಾಗಿ, ಯಾವ ಮಾತನ್ನೂ ಆಡದೆ, ಸುಮ್ಮನೆ ಕುಳಿತುಕೊಂಡಳು. ಮತ್ತೆ ತಂದೆಯುವರು ಕೇಳಿದರು

“ಎಷ್ಟು ಒಯ್ದಿದ್ದೆ? ಹೇಳುವುದಿಲ್ಲವೆ?”

ಹೆದರಿ ಹುಚ್ಚಾದ ದನಿಯಲ್ಲಿ ಸಾತಮ್ಮನ ಬಾಯಿಂದ ಒಂದು ಶಬ್ದವು ಹೊರಬಿದ್ದಿತು.

“ನಾ—ಕು....!”

ತಂದೆಯುವರು ಮುಗಿದಲಿಸುವ ಚುಚ್ಚುನೋಟದಿಂದ ಲಿಂಗಣ್ಣನ ಕಡೆಗೆ ನೋಡಿದರು. ಅವನು ಸತ್ತವನಂತಾಗಿದ್ದ ತಂದೆ ರೇಗಿದವರಾಗಿ ಕೇಳಿದರು.

“ಏನು ಲಿಂಗಪ್ಪಣ್ಣಾ! ನಿಮಗೆ ಗೊತ್ತಿಲ್ಲವಲ್ಲವೇ?”

ಲಿಂಗಣ್ಣನು ಮುಖ ಕೆಳಕ್ಕೆ ಬಾಗಿಸಿ, ಕಂಬನಿ ಮಿಡಿಯುತ್ತಲಿದ್ದ. ಸಾತಮ್ಮ ಕೊಂಚ ಧೈರ್ಯತಂದುಕೊಂಡವಳಾಗಿ ಹೇಳಿದಳು.

“ಅವನಿಗೇನೂ ಗೊತ್ತಿಲ್ಲ ರಾಯರ! ಎಲ್ಲಾ ತಪ್ಪೂನೂ ನಾನs ಮಾಡೀದೀನಿ.”

“ಅಂದರೆ....?” ತಂದೆಯುವರು ಕೇಳಿದರು.

ಸಾತಮ್ಮನಿಗೆ ಉತ್ತರ ಕೊಡುವುದಕ್ಕಾಗಲಿಲ್ಲ. ಕಣ್ಣಿಂದ ಧಾರೆ ಧಾರೆಯಾಗಿ ನೀರು ಸುರಿದುವು. ಕೊರಳ ಸಿರಗಳು ಬಿಗಿದು ಬಂದುವು. ತಂದೆಯವರು ಮತ್ತೆ ಕೂಗಿದರು.

"ಬರೀ ಅಳುತ್ತ ಕುಳಿತರೆ ಏನು ಮಾಡಿದಹಾಗಾಯಿತು? ಏನೇನಾಯಿತೆಂಬುದನ್ನು ಹೇಳು?"

ಸಾತಮ್ಮನು ಅಳುತ್ತಳುತ್ತಲೆ ಹೇಳಲುತೊಡಗಿದಳು.

"ಮಕ್ಕಳು ಜಾತರಿಗೆ ಹೊಸಾ ಅಂಗೀ ಬೇಡಿದೂ. ಕೊಂಡು ತರಲಾಕ ಮನ್ಯಾಗ ಒಂದು ಕಾಸೂ ಇರಲಿಲ್ಲ. ಅಲ್ಲೆ ಇಲ್ಲೆ ಕೈಗಡ ಕೇಳಿದರ ಎಲ್ಲೂ ಒಂದು ಕಾಸೂ ಹುಟ್ಟಲಿಲ್ಲ. ಏನು ಮಾಡೂದು ಅಂತ ಇವನ್ನ ಕೇಳಿದೆ. 'ಹೊಸಾ ಅಂಗೀ ತೊಟಕೊಂಡಾಗs ಜಾತ್ರಿ ಆಗತಯ್ತೇನು?' ಅಂತ ಕಾಡೂ ಮಕ್ಕಳನೆಲ್ಲಾ ಬೆದರಿಸಿ ಸುಮ್ಮಗs ಕುಂಡ್ರಿಸಿ ಬಿಟ್ರ. ನನ್ನ ಹೊಟ್ಯಾಗ ಮಾತ್ರ ಸುಚ್ಚ ಕುದ್ಯಾಂಗ ಆಗ ಲಾಕ ಹತ್ತಿತು. ಏನೇನೋ ಯೋಚಿಸೀ ಹಾಕೇ ಹಾಕಿದೆ. ಮಂದೀ ಮಕ್ಕಳು ಹೊಸಾ ಅರಿವೀ ತೊಟಗೊಂಡು ತಿರಗ್ಯಾಡತಿರುವಾಗ, ನನ್ನ ಮಕ್ಕಳು ತಿರಕರ್‍ಹಾಂಗ ಹರಕರವೀ ತೊಟಗೊಂಡು ತಿರಗ್ಯಾಡಬೇಕಾ ತಲ್ಲಾ........ ಅಂತ ಕೆಟ್ಟನಿಸಿತು. ಇಂವಗ ಹೇಳಿದರ ಬ್ಯಾಡಂತಾನಂತ ತಿಳದು, ತ್ವಾಟದಾಗ ಇಂವ ಇಲ್ಲದ ಯಾಳೀ ನೋಡಿ, ನನ್ನ ಹಿರೀಮಗನ ಕಡಿಂದ ಹಳೀಬಾಳ್ಯಾಗ ನಾಕ ಗೊನೀ ಕೊಯ್ಸಿಕೊಂಡು ಮುಚ್ಚಿ ಇಟ್ಟಿದ್ದೆ. ಸಂತಿಗೆ ಹೋಗೂವಾಗ ತ್ವಾಟದ ಬದೀಲೇನs ತರಿಬಿಸಿ, ಬಸಪ್ಪನ ಬಂಡೀ ಒಳಗ ಇಟಕೊಂಡು ಹೋದೆ. ಎಡ್ಡು ರುಪಾಯಿ ಮೂರು ಪಾವಲಿ ಬಂದೂ. ಅದರಿಂದನs ಎಲ್ಲಾ ಹುಡುಗೋರಿಗೆ ಒಂದೊಂದು ಅಂಗೀ ಹೊಲಿಸಿಕೊಂಡು ಬಂದೇನಿ ಇದೊಂದ ಸಾರಿಗೆ ನನ್ನ ತಪ್ಪ ಮಾಪ ಮಾಡ್ರಿ ಯಪ್ಪಾ! ಇನ್ನೊಮ್ಮೆ ಎಂದೂ ಹಿಂತಾ ಕೆಲಸಾ ಮಾಡ ಲಾಕಿಲ್ಲ...."

"ಇದೊಂದೇ ಸಾರೆಯೋ? ಹಿಂದೆ ಎಷ್ಟು ಸಲ ಮಾಡಿದುದು ಮುಚ್ಚಿ ಹೋಗಿದೆಯೋ?" ನಮ್ಮ ತಂದೆಯವರು ಕೋಪವನ್ನೇ ಕಾರಿದರು.

ಲಿಂಗಣ್ಣನಿಗೆ ಹುಚ್ಚು ಹಿಡಿದಂತೆ ಆಗಿದ್ದಿತು. ತಾನೀಗ ಏನು ಮಾಡಬೇಕು? ಹೇಗೆ ಮಾತನಾಡಬೇಕು? ಎಂಬುದೇ ತಿಳಿಯದಾಯಿತು.

ಸಾತಮ್ಮ ಕಳವು ಮಾಡಿದವಳೆಂದು ನಮ್ಮ ಮನೆಯವರೆಲ್ಲರೂ ಬೇಕಾದಹಾಗೆ ಅವಳನ್ನು ಬೈದರು. ಸಾತಮ್ಮ ಸುಮ್ಮನೆ ಕುಳಿತು ಎಲ್ಲವನ್ನೂ ಕೇಳುತ್ತಲಿದ್ದಳು. ನನಗೂ ಆಕೆಯ ಕಳ್ಳತನದ ಬಗೆಗೆ ಅಂದು ತಿರಸ್ಕಾರವುಂಟಾಯಿತು.

ಮುಂದೆ ಏನು ನಡೆಯಿತೆಂದು ಕೇಳುವುದಿದೆಯೇ? ಪಂಚಾಯತಿ ಕೂಡಿತು. ಎರಡು ರೂಪಾಯಿಗಳ ಸಲುವಾಗಿ ಲಿಂಗಣ್ಣನು ಎಷ್ಟೋ ರೂಪಾಯಿಗಳ ದಂಡವನ್ನು ತೆರಬೇಕಾಯಿತು. ವರುಷದ ಕೊನೆಯಲ್ಲಿಯೇ ತೋಟವನ್ನು ಬಿಟ್ಟುಕೊಡಬೇಕಾಯಿತು. ಹೊಸತಾಗಿಯೆ ನೆಟ್ಟು ನೀರುಣ್ಣಿಸಿದ ಬಾಳೆಯತೋಟದ ಸಲುವಾಗಿ, ಹಾರಯಿಸಿದುದೆಲ್ಲವೂ ಹಳವಂಡವಾಗಿ ಹೋಯಿತು.

* * * * *

ಆ ಹಿಂದಣ ಸಂಗತಿಯೆಲ್ಲವೂ ಇಂದು ನೆನಪಾದಾಗಲೆಲ್ಲ, ಲಿಂಗಣ್ಣನ ಹೆಂಡತಿಯ ಕಳವಿನ ಅಪರಾಧದ ಬಗ್ಗೆ ಗೊಂದಲದಲ್ಲಿ ಬಿದ್ದುಬಿಡುತ್ತೇನೆ. ಹಿಂದೆ ಎಂದೋ ಒಂದು ಕಾಲದಲ್ಲಿ ನಮ್ಮ ಪೂರ್ವಜರು, ಸ್ವಾತಂತ್ರ್ಯಪ್ರೀತಿಯ ದಾಯಾದಿಯೊಬ್ಬನನ್ನು ಸೆರೆಹಿಡಿದುಕೊಟ್ಟರು. ಅದಕ್ಕಾಗಿ ಜಗತ್ತು ಹುಟ್ಟಿದಾಗಲೇ ಹುಟ್ಟಿದ್ದ ಈ ತೋಟದ ನೆಲವನ್ನು —ಇನ್ನಾವ ದೇಶದಿಂದಲೋ ಬಂದ— ಬಾದಶಹನು, ಅವರಿಗೆ ಇನಾಮಾಗಿ ಕೊಟ್ಟ. ಆ ಪೂರ್ವಜರ ರಕ್ತಸಂಬಂಧಿಕರೆಂದು ಆ ನೆಲದ ಪೂರ್ಣ ಮಾಲ್ಕೀಹಕ್ಕು ನಮಗೆ ಬಂದಿತು. ಆದರೆ ಬಿಸಿಲೆನ್ನದೆ, ಬಿರುಗಾಳಿಯೆನ್ನದೆ, ಮಳೆಯೆನ್ನದೆ, ಚಳಿಯೆನ್ನದೆ, ಹಗಲಿರುಳೂ ಕಷ್ಟಪಟ್ಟು ದುಡಿದು ಬೆಳೆಯಿಸಿದ ಲಿಂಗಣ್ಣನ ಕುಟುಂಬದವರು, ಒಂದೆರಡು ಬಾಳೆಯ ಗೊನೆಗಳಿಗೂ ಹಕ್ಕುದಾರರಾಗುವಂತಿಲ್ಲವೇ? ತನ್ನ ಹೊಟ್ಟೆಯ ಕರುಳುಗಳ ಮೈಯ್ಯನ್ನು ಮುಚ್ಚುವುದಕ್ಕೆ, ಸಾತಮ್ಮನು ತನ್ನ ದುಡಿತದ ಫಲವನ್ನು ಉಪಯೋಗಿಸಿದ ಮಾತ್ರಕ್ಕೆ ಅದನ್ನು ಕಳವು ಎಂದು ಕರೆಯಬಹುದೋ?

---

## 'ನಮ್ಮ ರಾಷ್ಟ್ರಪುತ್ರರು'

"ನೀನೆಂದರೆ ಏತಕ್ಕೂ ಬೇಡದ ಕೇಡಿ" —ಎಂದು ನನ್ನ ಸಹಪಾಠಿ ರಾಮುವಿಗೆ, ನಮ್ಮ ಉಪಾಧ್ಯಾಯರೆಲ್ಲಾ ಹೇಳುವುದು ರೂಢಿ. ನಮ್ಮ ಚರಿತ್ರೆಯ ಮಾಸ್ತರರಂತೂ ಅವನ ಹೆಸರನ್ನು ಕೇಳಿದರೆ ರೇಗುತ್ತಾರೆ. ಒಂದು ಕಾಲದಲ್ಲಿ ಅದೇ ರಾಮುವನ್ನು ಕಂಡು, ಅವರೇ 'ಭಲೇ, ಭೇಷ್' ಎಂದು ಎಷ್ಟೋ ಬಾರಿ ಅವನ ಬೆನ್ನನ್ನು ಚಪ್ಪರಿಸಿದುದುಂಟು. ಈಗ ಅವರೇ 'ಬರುತ್ತಾ ಬರುತ್ತಾ ರಾಯನ ಕುದುರೆ ರಾಮುವಾಯಿತು' ಎನ್ನುತ್ತಿದ್ದಾರೆ. ನನಗೆ ನಮ್ಮ ರಾಮುವಿನಲ್ಲಿ ಅಂತಹ ಪರಿವರ್ತನೆಯು ಏಕೆ ಉಂಟಾಯಿತೋ ತಿಳಿಯದು. ಅವನು ಮೊದಲಿಗಿಂತ ತೀರ ದಡ್ಡನಾಗಿ ಬಂದುದು ನನಗೂ ಕಾಣಿಸುವುದು; ಆದರೆ ಉಪಾಧ್ಯಾಯರೆನ್ನುವಂತೆ 'ಕೇಡಿ, ಪೋಲಿ—'ಯಾದುದು ನನಗೆ ಕಾಣಿಸುವುದಿಲ್ಲ. ಇಂದೀಗ ರಾಮುವಿನ ಮೇಲೆ ತೀರ ಅಗೌರದ ಆರೋಪವೊಂದು ಹೊರಿಸಲ್ಪಟ್ಟಿದೆ. ಅವನನ್ನು ಇಡೀ ಶಾಲೆಯ ಮುಂದೆಯೇ ದಂಡಿಸುವ ತೀರ್ಮಾನವಾಗಿದೆ. ರಾಮುವು ತಪ್ಪಿತಸ್ಥನೆಂದು ನನಗೆ ಅನಿಸುವುದಿಲ್ಲ. ಕಾರಣ ಅವನು ಮಾಡಿಸುವಂತೆ ನಾನು ಮಾಡಿಲ್ಲವೆಂದು ಹೇಳುವವರಾರು? ಅವನು ಬಹಿರಂಗದಲ್ಲಿ ಆಡಿದ ಮಾತುಗಳನ್ನು ನಾನು ಅಂತರಂಗದಲ್ಲಿ ಆಡುತ್ತಿದ್ದೆ.

ರಾಮುವಿನ ಪರಿಚಯವು ನಿಮಗುಂಟಾಗಲು, ಹಿಂದಿನಿಂದ ಅವನ ಕಥೆ ಹೇಳಬೇಕು. ನಾನೂ ರಾಮುವೂ ಜತೆಯಾದುದು ೨ನೆಯ ಈಯತ್ತೆಯಲ್ಲಿ. ಆಗ ರಾಮುವು ತರಗತಿಯಲ್ಲಿ ಮೊದಲನೆಯವನು. ಅವನು ಓದುವುದೆಂಬುದಿಲ್ಲ. ಆದರೆ ಅವನ ಬುದ್ಧಿ ಅಷ್ಟು ಚುರುಕಿನದು. ಒಮ್ಮೆ

ಕೇಳಿದ ಸಂಗತಿಯನ್ನು ಎಂದೂ ಮರೆಯುವಂತಿರಲಿಲ್ಲ. ಅವನ ಚಟು ಪಟಿಕೆಯೇ? ಹೇಳಲು ತೀರದು. ಯಾವ ಆಟದಲ್ಲಿ ಅವನಿರುವನು, ಯಾವುದರಲ್ಲಿ ಅವನಿಲ್ಲ—ಎನ್ನಲು ಬರುವ ಹಾಗಿಲ್ಲ. ಅವನು ಒಂದು ದಿನದಲ್ಲಿ ನಗುವಷ್ಟು ನಗೆಯನ್ನು ನಾನು ಒಂದು ವರುಷದಲ್ಲಿ ನಗುತ್ತಿರಲಿಲ್ಲ. ನಮ್ಮ ಕ್ಲಾಸಿನಲ್ಲಿ ಅವನ ಮೇಲೆ ಮಮತೆಯಿಲ್ಲದ ಬಾಲಕನಿಲ್ಲ. ಆಗ ನನಗೂ ಅವನಿಗೂ ಈಗಿನಷ್ಟು ಗೆಳೆತನವಿದ್ದಿರಲಿಲ್ಲ. ಆದರೆ ರಾಮುವು ಕ್ಲಾಸಿನಲ್ಲಾಗಲಿ,ಎಲ್ಲಿಯೇ ಆಗಲಿ ಒಂದು ನಿಂತರೆ—ಅವನ ಬಳಿಗೆ ಹೋಗಿ ಮಾತನಾಡುತ್ತ ನಿಂತಿರುವ ಆಸಕ್ತಿಯು ನನ್ನದು. ಅವನ ನಡೆನುಡಿಯಲ್ಲಿ, ಅತ್ಯಂತ ಆಕರ್ಷಣಕಾರಕವಾದ ಶಕ್ತಿಯೊಂದಿತ್ತು. ಉಪಾಧ್ಯಾಯರು ರಾಮುವಿನ ಹೆಸರು ಹೇಳದ ದಿವಸವೇ ಇಲ್ಲ. ರಾಮುವು ಪುಸ್ತಕ ಹಿಡಿಯಲಿ, ಹಿಡಿಯದಿರಲಿ—ಮೊದಲನೆಯ ಸ್ಥಾನವನ್ನು ಬಿಟ್ಟವನಲ್ಲ.

ಒಂದು ವರುಷ ಸರಿಯಿತು. ನಾವು ೩ನೆಯ ಈಯತ್ತೆಯಿಂದ ೪ನೆಯ ಈಯತ್ತೆಗೆ ಕಾಲಿರಿಸಿದೆವು. ರಾಮುವಿನ ಧೋರಣೆಯಲ್ಲಿ ಬದಲು ಕಾಣಿಸಲಿಲ್ಲ. ಮೊದಲಿನ ರಾಮುವೇ ಅವನು. ಆಗಿಗಿಂತ ಚುರುಕಾಗಿರುವನು. ಮಕ್ಕಳು ಎಂತಹ ಆಟಕ್ಕೆ ಹೊರಡಲಿ, ಸಾಹಸಕ್ಕೇ ಮುಂದಾಗಲಿ ರಾಮುವನ್ನು ಬಿಟ್ಟು ಹೊರಡರು. ಈ ವರುಷದ ಹೆಚ್ಚಿನ ಸಂಗತಿಯೆಂದರೆ ರಾಮುವಿಗೂ ನನಗೂ ಉಂಟಾದ ಮೈತ್ರಿ. ನಾವೀಗ ಅತಿ ಆಪ್ತಗೆಳೆಯರು. ಅವನ ಯೋಗ್ಯತೆಯ ಕಾಲಂಶವೂ ನನ್ನಲ್ಲಿರಲಿಲ್ಲ. ಆದರೆ, ಅವನು ಅದರಿಂದಾಗಿ ನನ್ನನ್ನು ತಿರಸ್ಕರಿಸಿದವನಲ್ಲ.

ಇನ್ನೊಂದು ವರುಷ ಸರಿಯಿತು. ನಾವೆಲ್ಲ ೫ನೆಯ ಈಯತ್ತೆಯಲ್ಲಿ ಕಾಲಿರಿಸಿದೆವು. ರಾಮು—ಸಹ ಎಂದು ಹೇಳಬೇಕಿಲ್ಲ. ಇಲ್ಲಿಗೆ ಬಂದುದೇ ಮಾರಿಯಾಯಿತು. ಅವನ ಚೆಲುವಿನ ಹೆಸರನ್ನು ಕೆಡಿಸಿಕೊಳ್ಳಲು ಅವನು ೫ನೆಯ ಈಯತ್ತೆಗೆ ಬಂದಂತಾಯಿತು. ಈ ತರಗತಿಯ ಪಾಠಗಳು ಮತ್ತಷ್ಟು ಕಠಿನವಾದುವು. ಅವುಗಳನ್ನು ಕಲಿಸುವ ಸಲುವಾಗಿ ನಮ್ಮ ಶಾಲೆಗೆ ಹೊಸ ಮಾಸ್ತರರೊಬ್ಬರು ಬಂದರು. ಅವರಂಥ ಬುದ್ಧಿವಂತ ಮಾಸ್ತರರಿಲ್ಲವಂತೆ. ಅವರು—ವರುಷಾರಂಭದ ಮೊದಲಿನ ದಿವಸ,

ಮೊದಲಿನ ಪಾಠಕ್ಕೆ ನಮ್ಮ ತರಗತಿಗೇ ಬಂದರು. ನಮ್ಮ ಉತ್ಸಾಹ ಕೇಳ ಬೇಕೆ? ಅವರು ಬರುವ ಮೊದಲು, ಅವರ ಕೀರ್ತಿಯು ನಮ್ಮನ್ನು ಮುಟ್ಟಿತ್ತು. ಎಲ್ಲರೂ ಅವರ ಆಗಮನವನ್ನು ಚಾತಕಪಕ್ಷಿಗಳಂತೆ ನಿರೀ ಕ್ಷಿಸುತ್ತಿದ್ದರು. ಈ ರೀತಿ ಸಂತೋಷಭಾಗಿಗಳಾಗದವರೆಂದರೆ, ರಾಮು ವೊಬ್ಬನೇ. ರಾಮುವಿಗೆ ಅವನ ದೂರದ ಗೆಳೆಯನೊಬ್ಬನು —"ಅದು ಬರಿ ಬುರ್ನಾಸು ಜನ"—ಎಂದು ಹೇಳಿದ್ದನಂತೆ. ಅದನ್ನು ನಂಬಿದ ರಾಮುವು ನಮ್ಮ ಉತ್ಸಾಹದಲ್ಲಿ ಭಾಗಿಯಾಗಲಿಲ್ಲ.

ಉಪಾಧ್ಯಾಯರು ಬಂದರು. ಪಾಠವನ್ನು ಆರಂಭಿಸಿದರು. ಅವರು ಬಂದವರೇ ನಮ್ಮೊಡನೆ ಹರಟೆಗೆ ಆರಂಭಿಸುವರು—ಎಂದು ನಮ್ಮ ಆಶೆ ಯಾಗಿತ್ತು. ಆ ಮಾಸ್ತರರಿಗೆ ಯಾವ ಊರು, ಏನು ಕಥೆಯೆಂದು ತಿಳಿದುಕೊಳ್ಳುವ ಉತ್ಸಾಹ ನಮ್ಮದು. ಆದರೆ ಅವರು ಬಂದವರು ಪಾಠಕ್ಕೇ ಮೊದಲು ಮಾಡಿದರು. ನಾವೂ ಆತುರದಿಂದ ಕೇಳತೊಡಗಿದೆವು. ಮೊದಲು ಮೊದಲು ಅವರು ಮಾತನಾಡುತ್ತಿರುವರೋ ಇಲ್ಲವೋ ಎಂದು ತಿಳಿಯುವುದು ಕಷ್ಟವಾಯಿತು. ಏತಕ್ಕೆಂದರೆ ಅಷ್ಟು ಮೆಲ್ಲಗೆ ಅವರ ಪಾಠ. ಬಂದವರೇ ಹಿಡಿಸಿದರು ಭೂಗೋಳ ಪಾಠವನ್ನು. ಆಫ್ರಿಕದ 'ಜೂಲುಜನರ' ವಿಷಯವಾಗಿ ಒಂದು ತಾಸಿನ ತನಕ ಪಾಠ ಹೇಳಿದರು. ಅವರ ಒಂದೊಂದು ಅಕ್ಷರವು ಒಂದೊಂದು ತಾಳಕ್ಕೆ ಸರಿಯಾಗಿ ಉರು ಳುತ್ತಿತ್ತು. ಅರ್ಧಪಾಠವಾಗುವುದರಲ್ಲಿ ಒಂದೇ ವಿಷಯವನ್ನು ಆರು ಬಾರಿ ಹೇಳಿದರು. ಪಾಠ ಮುಗಿಯುವಾಗ ಇನ್ನಾರು ಸಾರಿ ಅದನ್ನು ಹೇಳಿ ಮುಗಿಸಿದರು. ನನ್ನ ಕಣ್ಣು ಬಾಡಿತು. ಅವರ ಮುಖವನ್ನು ನೋಡುತ್ತ ಕುಳಿತ ನನಗೆ ಆಕಳಿಕೆ ಬರತೊಡಗಿತು. "ಆ-ಫ್ರಿ-ಕ-ದ ಜೂ-ಲು-ಜ-ನ-ರು" ಎಂದು ಅವರು ಮೇಲಿಂದಮೇಲೆ ಹೇಳುವಾಗ, 'ಜೂಲು ಜನರು ಅದಷ್ಟು ಬೇಗ ಸತ್ತಿದ್ದರಾಗುತ್ತಿತ್ತು' —ಎಂದು ಕಾಣಿಸಿತು. ಸರಿ, ಪಾಠ ಮುಂದರಿಯಿತು. ಘಂಟೆಯಾದರೂ ಮುಂದರಿ ಯಿತು. ಘಂಟೆ ಬಾರಿಸಲು ಉಸ್ಸೆಂದು ಕೈನೀಡಿ ಎದ್ದೆವು. 'ಎಲ್ಲಿಗೆ? ಕುಳಿತುಕೊಂಡಿರಿ!'—ಎಂದರು. ಇನ್ನೂ ೧೦ ಮಿನಿಟುಗಳ ತರುವಾಯ ಪಾಠ ಮುಗಿಯಿತು. ಅನಂತರದ ಪಾಠ ಗಣಿತ. ಅವರೇ ಗಣಿತಕ್ಕೂ

ಮಾಸ್ತರರು. $(a+b)^2=a^2+b^2+2ab$ ಎಂಬ ಪಾಠ ಬಂದಿತು. ಈ ಬೀಜಗಣಿತದ ಪ್ರತಿಬೀಜವನ್ನು ಸಿವಿಂಷಕ್ಕೆ ಹತ್ತುಸಾರಿಯಂತೆ ಕಿತ್ತು, ನಮ್ಮಲ್ಲಿ ನೆಡತೊಡಗಿದರು.

ಆ ದಿನವೆಲ್ಲ ಹಾಗೆಯೇ ನಡೆಯಿತು. ಒಂದೇ ದಿನ ನಾಲ್ಕು ಪಾಠಗಳು ಅವರವು. ಇಂಗ್ಲಿಷು, ಕನ್ನಡ, ಗಣಿತ, ಭೂಗೋಳ—ಎಲ್ಲವು ಅವರಿಂದಲೇ ಆಯಿತು. ಅವರು ನಮ್ಮ ಕ್ಲಾಸುಮಾಸ್ತರರು. ಘಂಟೆಗಳು ಸರಿದುವು, ದಿನದಿನಗಳು, ವಾರಗಳು ಸರಿದುವು. ಶನಿವಾರ, ಆದಿತ್ಯವಾರದ ರಜಾದಿನಗಳಲ್ಲಿ ಮನೆಯೊಳಗೆ ಕುಳಿತಿದ್ದರೆ— ಮಾಸ್ತರರು ಇಪ್ಪಿಕದ 'ಜೂ-ಲು-ಜ-ನ-ರ' ವಿಷಯವಾಗಿ ಹೇಳುತ್ತಿದ್ದಂತೆ ಕೇಳಿಸುತ್ತಿತ್ತು.

ಈ ವಾರ ಮುಗಿದು ರಜೆ ಬಂತೆಂದರೆ, 'ಆ ವಾರ ವನ್ನು ಮರೆಯುವುದೇ ಕಠಿಣವಾಯಿತು. ಕ್ಲಾಸಿನಲ್ಲಿರಲಿ, ಹೊರಗಿರಲಿ—ಸೃಷ್ಟಿಯೆಂಬುದು ಇರುವೆಯಂತೆ ನಡೆದು ಹೋಗುತ್ತಿದ್ದಂತೆ ಕಾಣುವುದು. ನಮ್ಮ ಕಿವಿಗೆ ಹಕ್ಕಿಗಳ ಕೂಗಿನ ಅರ್ಥವೇ ಆಗುವಂತಿಲ್ಲ. ಗೆಳೆಯರು ಮಾತನಾಡಿದರೆ—ಜೂ-ಲು-ಜ-ನ-ರಂತೆ ಮಾತನಾಡಬೇಕು; ಜೂ-ಲು-ಜ-ನ-ರಾಗದೆ ಮಾತನಾಡಿದರೆ ಅರ್ಥವಾಗುವಂತಿಲ್ಲ. ರಜೆಯ ದಿವಸಗಳು ಕಳೆದು ಶಾಲಾ ದಿನವು ಬಂದರೆ—ಶಾಲೆಗೆ ಹೋಗುವುದೆಂಬುದು, ಕಳ್ಳರನ್ನು ಬಂದಿವಾಸಕ್ಕೆ ಒಯ್ದಂತೆ ಕಾಣುತ್ತಿತ್ತು. ತರಗತಿಯಲ್ಲಿ ಕುಳಿತಿದ್ದರೆ ನಮ್ಮ ಕಣ್ಣಿಗೆ-ಖುರ್ಚಿ-ಮೇಜು-ಡೆಸ್ಕು-ನಾವು-ಎಲ್ಲರೂ ಒಂದೇ ವರ್ಗದ ವಸ್ತುಗಳಾಗಿ ಕಾಣುತ್ತಿದ್ದೆವು.

ಒಂದು ರಜಾದಿನ ನಾನು, ತೀರ ಬೇಸರಗೊಂಡು, ರಾಮುವಿನ ಮನೆಗೆ ಹೋಗಿದ್ದೆ. ಈಗೀಗ ನಾನು ಮನೆಯನ್ನು ಬಿಡುವುದಿಲ್ಲವಿತ್ತು. ಜವುವಿನ ಘಳಿಗೆಯಲ್ಲಿ ರಾಮುವಿನೊಡನೆ ಹರಟುವುದಿಲ್ಲವಿತ್ತು. ರಾಮುವೂ ಹರಟಿದ್ದನ್ನು ನಾನು ಕೇಳಿರಲಿಲ್ಲ. ಅಂತು ನನ್ನ-ಅವನ ಗೆಳೆತನವು ಮರೆತಂತೆಯೇ ಸರಿ. ನಾವಿಬ್ಬರೂ ಕ್ಲಾಸಿನಲ್ಲಿ ಕುಳಿತಿರುವಾಗ ಜತೆಯಲ್ಲಿ ಕುಳಿತಿರುವೆವು. ಅವನ ಮುಖವನ್ನು ನಾನು ನೋಡುವೆನು. ಅವನು ನನ್ನನ್ನು ನೋಡುವನು. ಆದರೆ ನಮ್ಮೊಳಗೆ ಮಾತಿಲ್ಲ;

ನಗುವಿಲ್ಲ. ಇಂಥ ಪರಿಸ್ಥಿತಿಯಲ್ಲಿ ರಾಮುವಿನ ಮನೆಗೆ ಹೋದೆನು. ರಾಮುವು ತನ್ನ ಕೋಣೆಯಲ್ಲಿ ಕುಳಿತಿದ್ದನು. ಹಿಂದಿನ ವರುಷ ಅವನು ಹಾಗೆ ಎಂದೂ ಕುಳಿತಿರುತ್ತಿರಲಿಲ್ಲ. ಕುಣಿಯುವ ಜೀವ ಅವನದು. ಈಗ ರಾಮುವು "ರಾಯನ ಕುದುರೆ"ಯಲ್ಲವೇ! ಕುಳಿತಿದ್ದಾನೆ. ನಾನು ಹೋಗಿ ನಿಂತೆ. ಅವನು ನನ್ನನ್ನು ನೋಡಿದನೆಂದು ನನ್ನ ತಿಳುವಳಿಕೆ. ಆದರೆ ನಿಜಕ್ಕೂ ನೋಡಿರಲಿಲ್ಲ. "ರಾಮು"—ಎಂದು ಕರೆದೆನು. ಅವನು ಬಾಯಿಯಿಂದ ಹಗುರವಾಗಿ "ಆ-ಫ್ರಿ-ಕ-ದ-ಜೂ-ಲು-ಜ-ನ-ರು" ಎನ್ನುತ್ತಿದ್ದನು. ನಾನು ನಕ್ಕೆ. "ಅವರು ನತ್ತಾಯಿತು ರಾಮು.-ಏಳು, ಆಟಕ್ಕೆ ಹೋಗುವ"—ಎಂದೆ. ಅವನಿಗೆ ಅದು ಕೇಳಿಸ ಲಿಲ್ಲ. ತಿರುಗಿ "ಜೂ-ಲು-ಜ-ನ-ರು" ಎಂದನು. ನಾನು ನನ್ನ್ಯಯ್ಯನ್ನು ಅಲುಗಾಡಿಸಲು—ಎಚ್ಚರಗೊಂಡು "ಸರ್ ಹೌದು! ಆ-ಫ್ರಿ-ಕ-ದ--ಜೂ-ಲು-ಜ-ನ-ರು" ಎಂದನು. ತಿರುಗಿ 'ರಾಮು'ವಾಗಿ ಮಾತನಾಡಲು, ನಾನು ಅವನನ್ನು ಚೆನ್ನಾಗಿ ಹಿಡಿದು ಅಲುಗಿಸಬೇಕಾಯಿತು.

ಎಂಟು ತಿಂಗಳುಗಳು ನರಿದುವು. ಒಂದು ದಿನ, ನಾನು, ನಮ್ಮ ಉಪಾಧ್ಯಾಯರ ಕಛೇರಿಯ ಸುತ್ತು,ಏಕೋ ಏನೋ ಸುಳಿದಾಡುತ್ತಿದ್ದೆ. ಆಗ ಅವರು "ಗುಜು ಗುಜು" ಮಾತನಾಡುವುದು ಕೇಳಿಸಿತು. ನಾನು ಆ ಸುದ್ದಿಯನ್ನು ಕೇಳಿ ಆತುರದಿಂದ,ನನ್ನ ಕ್ಲಾಸಿಗೆ ಧಾವಿಸಿದೆ. ರಾಮುವಿನ ಬಳಿ ಕುಳಿತು, ಅಲ್ಲಿ ಕೇಳಿದ ಸಂಗತಿಯನ್ನು ಅವನ ಕಿವಿಯ ಮೇಲೆ ಹಾಕಿದೆ. ರಾಮುವು ಒಮ್ಮೆಗೇ ಜಿಗಿದು ನಿಂತನು—"ನಮ್ಮಾಷ್ಟ್ರು ನತ್ತರು" ಎಂದು ಆವೇಶದಿಂದ ನಗುತ್ತ ಕಿರುಚಿಬಿಟ್ಟನು. ಇಡೀ ತರಗತಿಯೇ ಗೊಳ್ಳೆಂದು ನಕ್ಕಿತು. ರಾಮುವು ನಗುತ್ತ ಹೊರಗೋಡಿ ಹೋದನು. ಆ ದಿನ ತಿರುಗಿ ಅವನು ಶಾಲೆಗೆ ಬರಲಿಲ್ಲ. ಅವನು ಹೋದ ಅರೆಕ್ಷಣದಲ್ಲಿ ಇನ್ನೊಬ್ಬ ಉಪಾಧ್ಯಾಯರು ಕಾಲಿರಿಸಿದರು. ಆಗ ಹುಡುಗರ ಬೊಬ್ಬೆ ಕೇಳಿಸುತ್ತಿತ್ತು. ಎಲ್ಲರೂ ಉಪಾಧ್ಯಾಯರನ್ನು ಕಂಡು ತಟಸ್ಥರಾದರು. ಕಳ್ಳರಂತೆ ಮುಖ ಸಪ್ಪಗೆ ಮಾಡಿದರು. ಅವರು ಬಂದವರು "ರಾಮುವೆಲ್ಲಿ?"— ಎಂದರು. ರಾಮುವಿಲ್ಲ. 'ಈಗ

ಕೂಗಿದ್ದಾರು?' ಎಂದು ಕೇಳಿದರು. ರಾಮುವೆಂಬುದು ಅವರಿಗೆ ತಿಳಿದಿತ್ತು. ಈಗ ನಿರ್ಣಯವಾಯಿತು.—ರಾಮುವು ಅಪರಾಧಿಯೆಂದು.

ಆ ದಿನ ಸಂಜೆ ನಮ್ಮ ಮಾಸ್ತರರು ನಿಜವಾಗಿಯೂ ತೀರಿಕೊಂಡರು. ಮರುದಿನ **ರಜೆ**ಯಿತ್ತು. ನಾನು ರಾಮುವಿಗೆ ತಿಳಿಸಿದ ವಾರ್ತೆಯು ಆ ಸಮಯದಲ್ಲಿ ಮಾತ್ರ ಅಸತ್ಯವಾಗಿತ್ತು. ನಾನು ಉಪಾಧ್ಯಾಯರ ಮಾತನ್ನು ಚೆನ್ನಾಗಿ ಕೇಳಿರಲಿಲ್ಲ. ನಾನು ಕೊಟ್ಟ ಸುಳ್ಳು ವಾರ್ತೆಯಿಂದ ರಾಮುವು ಅಪರಾಧಿಯಾದನು



# ವಿತಂತು-ವೇಶ್ಯೆ !

೧

“ಇನ್ನೂ ಆಗ ಎಂಟು ವರ್ಷದಾಕೆ. ಎಲ್ಲಿದ್ದೆನಾಗ? ಹಾ! ಅಜ್ಜಿಯ ಸೋದರತ್ತೆಯ ಮಗಳ ಮನೆಯಲ್ಲಿ; ಹೌದು, ಆ ಮುರುಕು ಮನೆಯಲ್ಲಿ; ಜೆಡಹತ್ತಿ ತೂಗುಬಿದ್ದ ಕರಕು ಜಂತಿಗಳ ಕಪ್ಪು ನೆರಳಲ್ಲಿ; ಆದರೇನು? ನಾನು ಇರುವಂತೆಯೇ ಇದ್ದೆ. ಮುಗಿಲು ಕಡಿದು ಬಿದ್ದರೂ ಮುಗಿಯದ ಹಿಗ್ಗಿನ ಸೂರೆ! ಏನು ಆಗಿನ ಆಟ! ಏನು ಕುಣಿತ! ಗೆಳತಿ ಯರೊಡನೆ ಮನೆಮುಂದೆ ಗೆರೆಕೊರೆದು, ಕುಣಿದ ಆ ಕುಂಟಲಪಿಯಾಟದ ಕುಣಿತ ಎಂಥದು! ಮಾಸಿದ ಪರಕಾರದ ಪರಿವೆಯಿಲ್ಲ, ಹರಿದ ಕುಬಸದ ಎಣಿಕೆಯಿಲ್ಲ, ಊಟವೋ ಯಾವಾಗಲೂ ತಂಗಳ! ಆಟವು ಮಾತ್ರ ಮಾಸಲ. ಆಡಿದಷ್ಟು ಹೊಸದು, ಬೇಡಿದಷ್ಟು ಬೇಕು. ಹಗಲಿನ ಹಾರಾಟ, ರಾತ್ರಿಯ ನಿದ್ದೆ-ಇವಂಥ ಸುಖಗಳಾಗಿದ್ದುವು ಆಗ! ತಿನಿಸು ಹೇಗೆ ಹೇಗೋ ದೊರೆಯುತ್ತಿತ್ತು, ಪರದೇಶಿಗೆ ದೊರೆಯುವಷ್ಟು. ಎರಡು ಮೂರು ದಿನದ ಬಕ್ಕರಿ ಮುಂಜಾನೆ,— ಸಾಧನೆ ಅದಕ್ಕೆ ಇಲ್ಲದಿದ್ದರೆ ಇದ್ದಂತೆ ತಿಳಿದು ತಿನ್ನುವದೊಂದು ಸಾಧನೆ!—, ಮಧ್ಯಾನ್ಹದಲ್ಲಿ ಪಲ್ಯೆ ಯಿಲ್ಲದ ಊಟ, ರಾತ್ರಿಯಲ್ಲಿ ಅದೇ ಮುಚ್ಚಿಟ್ಟಂತಹದು! ಆದರೇನು? ಆಗ ನಾನುಂಡ ಸುಖವೇ ಸುಖ. ಮುಂದೆ ಹೇಗೆ ದೊರೆತೀತು? ನನಗೆ ಯಾತರ ಪರಿವೆಯೂ ಇರಲಿಲ್ಲ. ನಾನು ಬೆಳೆಯುವ ಹುಡಿಗೆ, ಹೆರವರ ಮನೆಯಲ್ಲಿ ಅವರ ಹಂಗಿನಲ್ಲಿ ಇರುವೆನಲ್ಲ!—ಎಂಬಿದಾವದೂ ನನ್ನ ಕನ ಸಿನ ಗಡಿನಾಡಿನಲ್ಲಿ ಕೂಡ ಕಾಲಿಡುತ್ತಿರಲಿಲ್ಲ. ಹಾಗೇ ಆಡುವದು, ಕುಣಿ ಯುವದು, ಹಸಿವಾದಾಗ ಮನೆ ನೆನೆಸುವದು, ನಿದ್ದೆ ಬಂದೊಡನೆ ಎಲ್ಲಿ

ಬೇಕಲ್ಲಿ ಕಾಲು ಚಾಚುವದು ಇವೇ ಎಂದೆಂದಿಗೂ ಇರುವ ರೀತಿನಡತೆಗ ಳೆಂದು ಬಹಳ ಗಟ್ಟಿಯಾಗಿ ತಿಳಿಸುಕೊಂಡವಳಂತೆ ನಾನು ಇದ್ದುಬಿಟ್ಟೆ. ಯಾರಾದರೂ ಹೊಸಬರು ನಮ್ಮ ಮನೆಗೆ ಬಂದಾಗ ನನ್ನ ನೋಡಿ ಕೇಳು ತ್ತಿದ್ದರು 'ಇವಳು ಯಾರು ?' ಎಂದು. ಅದಕ್ಕೆ ನನ್ನ ಸಾಕುತಾಯಿ ಏನೇನೊ ಹೇಳಿ ಒಂದೆರಡು ಕಣ್ಣಹನಿ ಮಿಡಿದು, 'ಪರದೇಶಿ ಹುಡಿಗೆ, ಅಲ್ಲಿ ಬಿಡೆದು ಇಲ್ಲಿ ಒಡೆದು ನಮ್ಮ ಕೈಗೆ ಬಂದಿದೆ!' ಎಂದು ಹೇಳುತ್ತಿದ್ದಳು. ನಾನು ಬೆಪ್ಪಾಗಿ ನಿಂತು ಅದೆಲ್ಲ ಕೇಳಿಕೊಂಡು ಅಳುಮೋರೆ-ಮಾಡುವಷ್ಟರಲ್ಲಿ ಹೊರಗೆ ಗೆಳತಿಯರು ಕೂಗುತ್ತಿದ್ದರು, ಪರಕಾರ ಹಾರಿಸುತ್ತ ಓಡಿಬಿಡುತ್ತಿದ್ದೆ. ಇನ್ನೊಂದು ಸಲ ನಾನು ದೊಡ್ಡಮನೆಯ ದಮಯಂತಿಯ ಕೂಡ ಹೋಗಿ ಆಡಿಆಡಿ ದಣಿವಾಗಲು ಅವರ ಒಳ ಕೋಣೆಯಲ್ಲಿ ಒಟ್ಟಿದ ಜೋಳದ ಚೀಲಗಳ ಸಂದಿನಲ್ಲಿ ಮಲಗಿಬಿಟ್ಟೆ. ಅಲ್ಲಿ ಯಾರೂ ಎಂದೂ ಮಲಗಿರಲಿಲ್ಲ. ಮನೆಯಾಳು ಕತ್ತಲೆಯಾದೊಡನೆ ಆ ಕಾಳಿನ ಕೋಣೆಗೆ ಕೀಲಿಯನ್ನು ಜಡೆದನಂತೆ. ನಮ್ಮ ಮನೆಯವರು ನನ್ನ ಹಾದಿ ನೋಡಿ ಬಾರದಿರಲು ನನ್ನ ಗೆಳತಿಯರ ಮನೆಗೆಲ್ಲ ಫಿರ್ತಿ ಹಾಕಿ ಉಸ್ಸೆಂದು ತಿರುಗಿದರಂತೆ. ಕಡೆಗೆ ಸಂಕಟಪಡುತ್ತ ಅಂಥ ಕತ್ತಲೆಯಲ್ಲಿಯೂ ಕೆರೆಬಾವಿಗಳನ್ನೂ ಇಣಿಕಿಣಿಕಿ ನೋಡಿದರಂತೆ. ನಾನು ಸಿಗಲಿಲ್ಲ. ಹೇಗೆ ಸಿಗುವೆ? ಅವರ ಚಡಪಡಿಕೆಯ ಚೀತ್ಕಾರಗಳು ಕೇಳ ದಂಥ ನಿದ್ದೆಯ ನಾಡಿನಲ್ಲಿ ನಾನು ಹನ್ನೆರಡು ತಾಸಿನ ರಾಣಿಯಾಗಿದ್ದೆ. ಬೆಳಗಾಯಿತು, ಹಕ್ಕಿಯ ಚಿಲಿಪಿಲಿಯೊಡನೆ ಎದ್ದೆ, ತಲೆಯನ್ನು ಉಗುರಿಸಿಕೊಂಡು ಕುಳಿತೆ. ಹೊಟ್ಟೆ ಕೆರೆದಿತ್ತು, ಬಾಗಿಲು ಮುಚ್ಚಿತ್ತು. ಧಡ ಧಡೆಂದು ನೂಕಿದೆ, ತೆಗೆದರು. ರಾತ್ರಿಯೆಲ್ಲ ಹಾಹಾಕಾರವೆಬ್ಬಿಸಿದ ಹುಡಿಗೆ ಸಿಕ್ಕಿತೆಂದು ಹೊರಮನೆಯವರು ಕೂಡ ಹಿಗ್ಗಿದರು. ನನ್ನ ಸಾಕುತಾಯಿ ಎಂದೂ ಕೊಡದ ಮುದ್ದುಕೊಟ್ಟು ಹರಸಿದಳು. ಹಾಗೆಯೇ, ಆಗಿದ್ದ ಹಾಗೆಯೇ ನಾನೇಕೆ ಇರಲಿಲ್ಲ?''

೨

''ನಾನೊಮ್ಮೆ ಪುಗಡೀ ಆಡುತ್ತಿದ್ದೆ—ಗೋದಿಯ ಕೂಡ. ಸಂಜೆಯ ಹೊತ್ತಿರಬೇಕು. ಯಾವಳೋ ಮುದುಕಿ ಹತ್ತಿರ ಹಾಯ್ದುಹೋದಳು.

ಮಡಿಯಾಗಿ ಗುಡಿಗುಡಿಗೆ ಹೊಂಟಿದ್ದಳೇನೊ. ನಮ್ಮ ಪರಕಾರದ ಚುಂಗು ಎಲ್ಲಿಯೋ ತಾಕಿತಂತೆ. ಅದರ ಉದ್ದಕಿನ ನೆರಳಿನ ತುದಿಯು ತಾಕಿದ್ದರೆ ತಾಕಿರಬಹುದು! ಅಷ್ಟಕ್ಕೇ ಅವಳ ಬಯ್ಗಳ ಅಷ್ಟಮಳೆಗೆ ಆರಂಭ ವಾಯ್ತು. ನಾವೇನು ಅದನ್ನೆಲ್ಲ ಕೇಳುತ್ತ ನಿಲ್ಲುವವರೇ? ನಮ್ಮ ರಿಂಗಣ ನಡೆದೇ ಇತ್ತು. ಆದರಿಂದ ಅವಳ ಬಯ್ಯುವಿಕೆಗೆ ಮತ್ತಿಷ್ಟು ಹುರುಪು ಬಂದಿತು. ತನ್ನ ಮಾತುಗಳನ್ನು ನಮಗೆ ಕೇಳಿಸಿಯೇ ಬಿಡಬೇಕೆಂದು 'ನಿಲ್ಲಿರೇ!' ಎಂದು ಜಬರಿಸಿ ನಿಲ್ಲಿಸಿದಳು. 'ಹನ್ನೆರಡು ಹದಿಮೂರು ವರ್ಷದ ಧಡಪೆಯರಾಗಿ ಏನ್ರೇ ಅದು ಆಡೋದು? ಮದುವೆಯಾಗಿದ್ರೆ ನಾಲ್ಕು ಮಕ್ಕಳ ತಾಯಿಯಾಗುತ್ತಿದ್ದಿರಿ.' ನಾವು ನಕ್ಕೆವು. 'ನಗರಿ, ನಗರಿ, ನಾಳೆ ತಿಳಿಯುವದು ಬೆಳಗಾದರೆ, ಗಂಡ ಒಂದು ಪುಗಡೀ ಆಡಿಸು ವಾಗ ತಲೆ ಹೇಗೆ ತಿರಗುವದೆಂಬದು. ಈಗ ಹೇಗೆ ತಿಳಿದೀತು? ಅವರ ವರ ಕಾಲಕ್ಕೆ ತಿಳಿದೀತು........ಮುದಕಿಗೆ ಇನ್ನೊಮ್ಮೆ ಮುಣುಗಿಸತೀರಿ ತಣ್ಣೀರೊಳಗೆ........' ಎಂದು ಗೊಣಗುಟ್ಟುತ್ತ ಹೋದಳು. ನನಗೆ ಮಾತ್ರ ಏನೋ ಹೊಸ ಮಾತು ಕೇಳಿದಂತಾಯ್ತು, ಕ್ಷಣಹೊತ್ತು ದಂಗುಬಡೆದು ನಿಂತೆನು. ಗೋದಿಯು ಕೈಹಿಡಿದು ಜಗ್ಗಲು ಮೈಯೆಲ್ಲ ಜುಮ್ಮೆಂದಿತು. ಪುಗಡಿ-ಪುಗಡಿ ನಡೆಯಿತು, ಹಿಂದಿನದು ಹಿಂದುಳಿ ಯಿತು. ಒಂದೈದು ನಿಮಿಷಗಳಾದವು-ನಾನು ಆಡುತ್ತ ಆಡುತ್ತ ನಮ್ಮ ಮನೆಯ ಕಡೆಗೆ ನೋಡಿದೆ. ಯಾರೋ ದೊಡ್ಡದೊಡ್ಡ ನಾಲ್ಕು ಜನರು ಬಾಗಿಲಿಂದ ಹೊರಬಿದ್ದರು. ಅವರಿಗೆ ನನ್ನ ಸಾಕುತಂದೆ ಬೆನ್ನುಬಾಗಿಸಿ ನಮಸ್ಕಾರ ಮಾಡಿ ಕಳಿಸಿದರು. ಅವರು ನಾವಿದ್ದ ಹಾದಿಯಿಂದಲೇ ಬಂದರು. ನಾನು ತಿರುಗುತ್ತ ಅವರು ಹೊರಟ ದಿಕ್ಕಿನೆಡೆಗೆ ಬರಲು 'ಇದೇ ಆ ಹುಡಿಗೆ' ಎಂದೊಬ್ಬರು ತೋರಿಸಿದರು. ನಾನು ಮುಂದೆ ಅವರಿದಿರಾದಾಗ ಅವರೊಂದು ಬಿರುಗಣ್ಣಿನಿಂದ ಬಿರುಸಾಗಿ ನೋಡಿದರು. ಅದಿನ್ನೂ ನಾನು ಮರೆಯದಿರುವೆ. ಅವರು ಮುಂದೆ ಸಾಗಿದರು.

ನಾಲ್ಕೈದು ದಿನಗಳಾದವು. ನನ್ನನ್ನೇಕೋ ಒಂದುದಿನ ಬಹಳ ಸಿಂಗ ರಿಸಿದಳು ತಾಯಿ. ನಾನೇನು ಅಷ್ಟು! ಚೆಲುವೆಯೆಲ್ಲ, ಅಂತೇ ಸಿಂಗರಿ ಸಿರಬೇಕು. ನನ್ನ ಮೈತುಂಬ ವಸ್ತ್ರಗಳು, ಕಾಲಲ್ಲಿ ಪೈಜಣರುಳಿಗಳು

ಕೂಡ. ನನ್ನಂತೆ ಮುರುಕುಮನೆಯೂ ಸಿಂಗಾರವಾಗಿತ್ತು. ಜಂತಿಯ ಇಲ್ಲಣ, ಮೂಲಿಯ ಕಸ, ಮಾಡದೊಳಗಿನ ಚಿಂದಿಗಳೆಲ್ಲ ಮಾಯವಾಗಿದ್ದುವು ನಾನು ಹುಚ್ಚುಹಿಗ್ಗಿನಲ್ಲಿ ನನ್ನನ್ನೇ ಹಿಂದುಮುಂದೆ ನೋಡಿಕೊಳ್ಳುತ್ತ ತಿರುಗುತ್ತಿದ್ದೆ. ನಾಲ್ಕು ತಾಸೇರಿತ್ತು. ಹಾಸಿದ ಜಮಖಾನೆಯ ಮೇಲೆ ಯಾರೋ ನಾಲ್ವರು ಬಂದು ಕುಳಿತರು. ನನ್ನನ್ನು ತಂದೆ ಕರೆದರು. ನಾನು ಹೋಗಿ ಮೂಲೆಯಲ್ಲಿ ಮುದುಡಿ ಕುಳಿತೆ. ಹೆಸರು ದಸೆಗಳಾದವು. ಮೋರೆಯನ್ನು ಮೇಲೆತ್ತಲು ಗಡಚುದನಿಯೊಂದು ಹೇಳಿತು, ಮೇಲೆ ನೋಡಿದೆ. ಇದುರಿಗೆ ಲೋಡಿಗೆ ಆತುಕೊಂಡು ಕುಳಿತವರ ಹಿರಿಮೀಸೆಯಷ್ಟೆ ಕಂಡಿತು, ಕೂಡಲೆ ಕೆಳಕೆಳಕ್ಕೆ ಬಾಗಿದೆ. ನನಗೆ ತಿನ್ನಲು ಕೊಟ್ಟರು, ಕುಣಿಯುತ್ತ ಎದ್ದೆ. ಮತ್ತೆ ನಾಲ್ಕು ದಿನಗಳಾದವು. ನಾವೆಲ್ಲರೂ ಒಂದು ಅಡವಿಯ ನಡುವಿನ ಗುಡಿಯಲ್ಲಿ ಬಂದಿದ್ದೆವು. ನಾನು ಮನೆಯಲ್ಲಿ ನೋಡಿದ ಅವರನ್ನೇ ಅಂತಃಪಟದಿಂದ ಮರೆಮಾಡಿ ನಿಲ್ಲಿಸಿ ಇಬ್ಬರಿಗೂ ಅಕ್ಕೀಕಾಳು ಹಾಕಿದರು. ಅತ್ತ ಒಬ್ಬರು ನನ್ನ ತಂದೆಗೆ ಎಷ್ಟೋ ಹಣವೆಣಿಸಿಕೊಟ್ಟರು. ಒಂದು ದಿನದಲ್ಲಿ ನನ್ನ ಮದುವೆಯಾಯ್ತು. ಹೀಗೆ ಹೇಳಿದರು— ನಾನೂ ಅಂದೆನು. ಆದರೆ ಹಾಗೆಂದರೇನೋ!"

೩

"ಈಗ ನಾನು ಹೆಂಡತಿಯಾದೆ. ಅಂದರೆ ಮತ್ತೊಂದು ಊರಲ್ಲಿ ಮತ್ತೊಬ್ಬರ ಮನೆಯಲ್ಲಿ ಇರಹತ್ತಿದೆ. ದೊಡ್ಡಮನೆ —ಅಲ್ಲಿ ನಾನೇ ನಾನು, ಅವರೇ ಅವರು. ಹೀಗೆ ಎಂಟುಹತ್ತು ದಿನಗಳವರೆಗೆ ಎಷ್ಟು ಸೊಗಸಾಗಿದ್ದೆ! ಮುಂದೆ ನಾಲ್ಕು ಹುಡುಗರು—ಎರಡು ಹೆಣ್ಣು ಎರಡು ಗಂಡು—ಅಲ್ಲಿಗೆ ಬಂದು ಇರತೊಡಗಿದರು. ಒಂದೇ ಹೊಟ್ಟೆಯವರಿರಬೇಕೆಂದೆ. ಎಲ್ಲ ತಿಳಿಯಿತು. 'ಅವ್ವಾ!' ಎಂದು ಅವರೆಲ್ಲ ನನಗೆ ಕರೆದೇಬಿಟ್ಟರು. ನನ್ನ ಮೈ ಬೆವರಿತು. ಪುಗಡಿಯಾಡುವಾಗ ಮುದುಕಿಯಂದ ಮಾತುಗಳು ಸಿಡಿಲಿನಂತೆ ಕಿವಿಗೆ ಹೊಡೆದವು. ಮದುವೆಯಾದೊಡನೆ ನಾಲ್ಕು ಮಕ್ಕಳ ತಾಯಿಯಾದೆ! ಅಂದಿನಿಂದ ನನ್ನ ಆಯುಷ್ಯದಲ್ಲಿ ನನ್ನ ಸಂತೋಷೋದ್ಧಾರ ಮಳೆಗಾಲವು ಮೊದಲಾಯ್ತು. ಅಂದಿನಿಂದಲೇ

ಮಿಂಚಿನ ಮೇಲೆ ಮಿಂಚು ಮೂಡಿದವು–ನನ್ನ ಮುಗಿಲಿನಲ್ಲಿ. ವರ್ಷರಡು ವರ್ಷದ ಕಣ್ಣೀರು ಕಾಲುವೆಗಳಲ್ಲಿ ಹರಿದಿದ್ದರೆ ನನ್ನನ್ನೇ ನುಂಗುವಷ್ಟು ಆಗಬಹುದಿತ್ತು. ನಾನು ಅರಿತೆ, ಎಲ್ಲ ಅರಿತೆ. ಗಂಡ ನಾಲ್ವತ್ತು ವರ್ಷದ ಮುದುಕ, ಹಣತೆತ್ತು ನನ್ನ ಕೊಂಡ, ನಾನು ನಾಲ್ಕು ಮಲಮಕ್ಕಳ ಮಲತಾಯಿ, ಕಡೆವರೆಗೆ ಈ ಕೊಳೆಯಲ್ಲಿ ಮುಳುಗಿ ಏಳಬೇಕು! ಆಗಲಿ ಎಂದೆ. ಹಗಲೆಲ್ಲ ದುಡಿತ; ಮಲಮಕ್ಕಳ ಶುಶ್ರೂಷೆ, ಇಲ್ಲವೆ ಅವರ ಪರಾಮರಿಕೆ. ರಾತ್ರಿಯಲ್ಲಿ ಎಂದೋ ಒಮ್ಮೆ ಒಮ್ಮೆ ನಿದ್ದೆ, ಇಲ್ಲದಾಗ ಕಣ್ಣೀರು, ತೂಕಡಿಕೆ, ಆಯಾಸ, ಸಾವಿನ ಸನಿಯದ ನೋವು........

ಒಂದು ರಾತ್ರಿ, ಕೈಕಾಲುಗಳೆಲ್ಲ ಹರಿಯುತ್ತಿದ್ದವು. ಹಾಸಿಗೆ ಕೂಡ ಹಾಸಲಾಗದೆ ಚಾಪೆಯ ಮೇಲೆ ಮಲಗಿಬಿಟ್ಟೆ. ಹೇಗೋ ದೆವ್ವನಂಥ ನಿದ್ದೆ ಮುಸುಕಿತು. ಅವರು ಬಡಿದೆಬ್ಬಿಸಬೇಕೆಂದರಂತೆ. ನಾನು ಏಳಲೇ ಇಲ್ಲ. ಅವರು ಹೋಗಿಬಿಟ್ಟರು. ನಾನು ನಡು ಇರುಳಿನಲ್ಲಿ ಧುತ್ತೆಂದು ಗಾಬರಿಗೊಂಡು ಎದ್ದೆ. ಬಾಗಿಲ ತೆರೆದಿದೆ. ಹುಡುಗರು ಅಲ್ಲಲ್ಲಿ ಅಸ್ತವ್ಯಸ್ತವಾಗಿ ಮಲಗಿವೆ. ಗಾಳಿನುಗ್ಗಿ ಚಿಮಣಿಯನ್ನು ನಂದಿಸಿದೆ. ಹೊಸತಿಲವರೆಗೆ ಹೋಗಿ ನೋಡಿದೆ. ಅವರ ಮೊಚ್ಚೆಗಳೇ ಇರಲಿಲ್ಲ. ಎದೆ ಹಾರಿತು. ಹಿಂದೆ ನೋಡಿದೆ, ಕತ್ತಲೆ; ಮುಂದೆಯೂ ಅದೇ. ನಾನೇಕೆ ಇಲ್ಲಿ? ಎನಿಸಿತು. ಆದರೂ ಕೈಗಳೊಮ್ಮೆಲೆ ಬಾಗಿಲ ಹಾಕಿಬಿಟ್ಟವು. ನಾನು ದಾರಿಕಾಯುತ್ತ ಬಿದ್ದುಕೊಂಡೆ, ಕೆಂಪುಕಣ್ಣಿನಿಂದ ಬೆಳಗಿನಲ್ಲಿ ಬಂದರು. ಮುಂದೆಲ್ಲ ಇರುಳುಗಳಲ್ಲಿ ನಾನು,ಆ ಮಲಮಕ್ಕಳು ಇಷ್ಟೇ. ಯಾವಾಗಲೊಮ್ಮೆ ಅವರು ಮನೆಯಲ್ಲಿ ಮಲಗುತ್ತಿದ್ದರು. ದಿನಗಳೋಡಿದವು. ನನಗೊಂದು ಕೂಸು ಹುಟ್ಟಿತು, ಹೋಯ್ತು. ನಾನು ಬಹಳ ಅತ್ತೆನೇನೋ ಹೌದು; ಆದರೆ ಅಳುವು ನನಗೆ ಹೊಸದಾಗಿರಲಿಲ್ಲ ಅಂತೇ ಅಷ್ಟು ಅಳುಕನ್ನು ಕೊಡಲಿಲ್ಲ. ಅದು ಒಂದು ಊಟ ಉಡಿಗೆಗಳಂತೆ ದಿನಗೆಲಸ. ನಾನು ಎಷ್ಟೋ ದೊಡ್ಡವಳಾಗಿ ಹರೆಯಕ್ಕೆ ಬಂದೆ, ಅವರು ನಿಜವಾಗಿ ನನ್ನಲ್ಲಿ ಅಕ್ಕರೆಯಿಂದ ನಡೆಯತೊಡಗಿದರು. ಯಾವಾಗಲೂ ಕೂಡಿಯೇ ಇರುತ್ತಿದ್ದೆವು. ಅವರಿಗೆ ಪೆನ್ಶನ್ನೂ ಆಗಿಬಿಟ್ಟಿತ್ತು, ಬಲವೂ ಉಕ್ಕಿಬಂದಿತ್ತು. ಇದೇನೊ ನನ್ನ ಹಣೆಬರಹವನ್ನು

ತಿದ್ದಿದಂತಾಯ್ತು ಎಂದು ಜೀವ ಹಗುರಾಗಿತ್ತು. ಆಗೊಂದು ರಾತ್ರಿ. ಇಬ್ಬರೂ ಮಲಗಿದ್ದೇವೆ. ಯಾರೋ ಬಾಗಿಲ ತಟ್ಟಿದರು. ಹೋಗಿ ನೋಡಲು ಒಬ್ಬ ಅಸ್ಪೃಜಾತಿಯ ಮುದುಕಿ. ಕೈಯಲ್ಲಿ ಚಂಚಿ, ಕೆಂಪು ತುಟಿ, ಕಾಲಲ್ಲಿ ಸೊಗಸಿನ ಪೊಚ್ಚೆ ಜೋಡು. 'ರಾಯರೆಲ್ಲಿ?' ಎಂದಳು. ಎಬ್ಬಿಸಲೇಬೇಕಾಯ್ತು. ನಾನು ಒಳಕ್ಕೆ ಹೋದೆ. ಅವರ ಮಾತು ಗಳಾದವು —ವೀಳ್ಯ ತಂಬಾಕವೂ ಆಯ್ತು. ಮೋಹದರಸವು ಒಡಲ ಸೇರಿ ರಕ್ತವನ್ನು ಕುಣಿಸತೊಡಗಿತು. ಅವರು ಹೊರಗೆ ಹೊರಟು ಬಿಟ್ಟರು. ನಾನಾಗ ಅಂಗಲಾಚಿದ್ದು ವಿಪರೀತ, ಒಂದೆರಡು ತಾಸಿನ ವರೆಗೆ. ಅದರ ಪರಿಣಾಮ, ಕೆಂಡದ ಅವತಾರ. ಹೊಸತಿಲ ದಾಟಿದರು; ಆ ಮುದುಕಿಯು ಮುಗುಳುನಗೆ ಬೀರಿಸಲ್ಲಿ; ನಾನು ಹುಚ್ಚಿಯಂತೆ ಕೈ ಜಗ್ಗಿ 'ನಾನೇ ಹಾಗಿರುವೆ, ಮತ್ತೇಕೆ ಹೊರಚಾಳಿ?' ಎಂದು ಕೂಗಿ ಕೊಂಡೆ. 'ದೆವ್ವ, ಕೈಬಿಡು. ಈ ನಾಲ್ಕು ಕುನ್ನಿಗಳನ್ನು ಸಾಕೋದಕ್ಕೆ ನೀನು....ಒಳಗೆ ಬೀಳು ಹೋಗು' ಎಂದು ನನ್ನ ಒದೆದು ಹೋದರು. ನಾಲ್ಕು ಮಕ್ಕಳ ತಾಯಿ! ನಾಯಿ! ನಾ ಬಿದ್ದೆ, ಜೀವ ಹೋದಂ ತಾಯ್ತು, ಪ್ರಾಣವು ಹೋಗಲಿಲ್ಲ. ಮತ್ತೆ ಇರಹತ್ತಿದೆ ಅವರು ಆ ಮುಂದೆ ಹಗಲಿನಲ್ಲಿ ಕೂಡ ಊಟದ ಕೆಲಸಿಮಿಷಗಳಿಗಾಗಿ ಮಾತ್ರ ಕಾಲು ಎಳೆಯುತ್ತ ಬರುತ್ತಿದ್ದರು. ಒಂದೊಂದು ಸಲ ಆ ಮಕ್ಕಳನ್ನೂ ತಮ್ಮ ಜತೆಗೆ ಊಟದ ತರುವಾಯ ಕರೆದೊಯ್ಯುತ್ತಿದ್ದರು. ಆಯ್ತು.ನಾನಂದು ಕೊಂಡೆ, ನಾನು ಮಲತಾಯಿ, ಅವಳು ಮಲ–'ಸಾಸಿ', ಅವರು ಮಾತ್ರ ನಿರ್ಮಲರು! ನಾನು ಹೊರಗಿನ ಜಗತ್ತನ್ನು ನೋಡಿದೆ, ಎಲ್ಲಿ ಹೋದರೂ ಮನೆಗೊಂದು ಬಿರುಕು, ಹಿಂದೋ ಮುಂದೋ—ಎಲ್ಲಿಯಾದರೂ ಒಂದು ಕಡೆ. ಅಂದಮೇಲೆ ಅದು ಒಂದು ಶೋಭೆ, ಇದು ನನ್ನ ಶೋಭೆ, ನಾನೇಕೆ ಸರಿಮಾಡಿಕೊಂಡು ಇರಬಾರದು? ಹೀಗೆಂದು ಹೊಲದ ಹಣ, ಉಳಿದ ಏರ್ಪಾಡುಗಳಲ್ಲಿ ಚೀಸಾಗಿ ಮನಸ್ಸು ಹಾಕಿದೆ. ಅವರಿಗೂ ಅದರ ಅರಿವುಂಟಾಗುವಂತೆ ಹವಣಿಸಿದೆ. ಆ ಮನೆಯು ಸೂರ್ಯ ಚಂದ್ರರಿರುವ ವರೆಗೆ ನನ್ನದೆಂದು ತಿಳಿದು, ನಾನು ಶಾಶ್ವತವೆಂದು ಬಗೆದು ಅದರ ಗೋಡೆ ಗಳನ್ನು ಮುದ್ದಿಟ್ಟೆ, ಎಲ್ಲ ಸಾಗಿಸಿದೆ. ಅವರದೂ ಅತ್ತ ನಡೆದಿತ್ತು. ಬಹಳ

ಸುಸೂತ್ರವಾಗಿತ್ತು. ಆದರೆ ಗಾಳಿಯಲ್ಲಿ ವಿಷವು ಮುಸುಕುನಗೆಯಿಂದ ಬಂದಿತು. ನನಗೆ ಇಪ್ಪತ್ತು ವರುಷ, ಅವರಿಗೆ ಅದರ ತಿಪ್ಪಟ್ಟು. ಸಾಸಿಯ ಸಹವಾಸದ ಪುಣ್ಯ—ಅವರು ಸ್ವರ್ಗಲೋಕದ ಸಾನಿಯ ಭೆಟ್ಟಿಗೆ ಹೋದರು—ನನ್ನ ಕರಿಮಣಿಯ ಮೋರೆ ಬೆಳ್ಳಗಾಯ್ತು.

೪

"ಅತ್ತತ್ತು ನಾನೊಮ್ಮೆ ನಕ್ಕೆ—ನನ್ನನ್ನೇ ನೋಡಿಕೊಂಡು ಹದಿನೈದು ದಿನದ ಮೇಲೆ. ಕನ್ನಡಿಗಳೇಕೆ ಹುಟ್ಟಿದವೋ ಎನಿಸಿತು. ತಲೆಗೂದಲು ನೆಲಪಾಲು, ಕೆಂಪುಸೀರೆ ನನ್ನ ಪಾಲು! ಕುಪ್ಪಸದೊಡನೆ ನನ್ನ ನಾಚಿಕೆಯೂ ಹಳ್ಳಕೂಡಿತು. ಈಗ ನಾನು ವಿತಂತು—ದಾರ ಕಳೆದು ಹೋದ ಹಾರ! ನಾನು ಮುದ್ದಿಟ್ಟ ಮನೆ ಹೊಡೆದೋಡಿಸುವಂತಾಯ್ತು. ಮಲಮಕ್ಕಳು ಸಾಸಿಯ ಮನೆ ಹಿಡಿದವು. ಅವಳ ಕರಳು ನನ್ನ ಕಿಂತ ದೊಡ್ಡದಲ್ಲವೇ? ಆದರೆ ನನ್ನಂತೆ ಅವರ ಸಾವಿನ ಗುರುತುಗೋರಿ ಅವಳಾಗಲಿಲ್ಲ–ಗೋರಿಯ ಬರಿದಲೆಯ ಮೇಲಿನ ಕೆಂಪುಡಿಗೆ ಬರಲಿಲ್ಲ. ಅದು–ಹೇಳಿ ಕೇಳಿ ಅವಳ ರೀತಿ. ಗಂಡಸರು ಅವಳಿಗೆ ಗಿಳಿಕಡಕ, ಒಂದಿಲ್ಲ ಇನ್ನೊಂದು ಮಾವಿಲ್ಲವೇ? ಭೂಮಿಯ ಮೇಲೆ ಎಷ್ಟು ಮಾಮರಗಳಿಲ್ಲ? ಅದೊಳ್ಳೆ ಸರಿಯೆಂದು ತೋರಿತು ನನಗೆ—ಯಾಕೊ! ಈಗಾಗಳೆ ಅವಳ ಮುಮುಕಿ ಇನ್ನೊಂದು ಕಾಯಿಗೆ ಕಲ್ಲೆಸೆದು ಬಂದಿದ್ದಳು. ಅವಳದೆಲ್ಲ ಪರಿಕೆಯ ಬಾಳುವೆ, ತೊಡರದ ನುಣ್ಣನೆಯ ರೇಶಿಮೆ ನೂಲು, ನನ್ನ ಗುಂಜು–ಗುಂಜಿಗೆ ಆರಂಭವಾಯ್ತು. ಅವರ ಸಂಬಂಧಿಕರು ಬಂದರು, ಮಕ್ಕಳ ಹೆಸರಿನಲ್ಲಿ ಎಲ್ಲ ತಮ್ಮ ಕಬ್ಜಾದಲ್ಲಿ ತಗೊಂಡರು. 'ನೀವು ತವರ್ಮನೆಗೆ ಹೋಗಿ ಮನಸ್ಸಿಗೆ ಹಗುರು ಮಾಡಿಕೊಳ್ಳಿರಿ' ಎಂದರು. ನನಗೆಲ್ಲಿ ತವರ್ಮನೆ? ಇರುವದೆಲ್ಲ ಸೀಸಿನ ಮನೆ! 'ನಾನೆಲ್ಲಿಯೂ ಹೋಗುವಹಾಗಿಲ್ಲ' ಎಂದೆ. 'ನಿಮ್ಮ ತಂದೆತಾಯಿಯಿದ್ದಲ್ಲಿಗೆ' ಎಂದರು. 'ಹೌದು, ಅವರಿದ್ದಲ್ಲಿ ಹೋಗುವದೊಂದು ಉಳಿದಿದೆ' ಎಂದು ಮೇಲೆ ಕೈಮಾಡಿದೆ. 'ಆದೇನು ಗೊತ್ತಿಲ್ಲ, ಬೇಕಾದರೆ ನಿಮಗೆ ಮುಂದೆ ಪೋಟಗೀ ಸಿಕ್ಕೀತು' ನಾನು ಹೆಚ್ಚಾಡದೆ ಹೊರಬಿದ್ದೆ. ಮೈಯಲೊಂದು ಕೆಂಪು ಸೀರೆ. ಕೈಯಲೊಂದು—ಒಳಗೆಲ್ಲ ಕೆಂಪುಕೆಂಪುರಿ. ಬಿಸಿಲು ಹೊಡೆದು ಬೀದಿ

ಯಿಂದ ಗುಡಿಯೊಂದು ಪೌಳಿಗೆ ಓಡಿಸಿತು. ಅಲ್ಲಿಯೇ ಕಾಲುಚಾಚಿ ಇದ್ದೊಂದು ಸೀರೆ ದಿಂಬುಮಾಡಿ ಮಲಗಿದೆ. ಅದೆಂಥ ಅದ್ಭುತ ನಿದ್ದೆ! ತಿರುಗಿ ನಸುಕಿನಲ್ಲಿ ಎದ್ದೆ, ಮುಚ್ಚಂಜೆಯೆಂದು ತಿಳಿದು. ಅಂದು ದ್ವಾದಶಿಯಾಗಿತ್ತು.ದೇವರ ನೈವೇದ್ಯ ಮಾಡಲು ಬಂದ ಯಾರೋ ಪುಣ್ಯಾತ್ಮರು ಮಡಿಯುಟ್ಟು ಗರ್ಭಗುಡಿಯ ಕಡೆ ನಡೆದಿದ್ದರು. ಅವರಿಗೇನು ಎನಿಸಿತೊ! ನನ್ನ ಮಾತಾಡಿಸಿದರು. ನಾನು ಸುಮ್ಮಗಿದ್ದರೂ ಅವರು ಬಿಡಲಿಲ್ಲ. ತಮ್ಮ ತಾಯಿಯಿಂದ ನನ್ನನ್ನು ಕರೆಯಿಸಿ ಊಟಕ್ಕೆ ಹಾಕಿದರು. ನನ್ನ ಸುದ್ದಿಯು ಗೊತ್ತಾಗಿ ಮರುಕದಿಂದ ಬೇಕಾದಷ್ಟು ದಿನ ತಮ್ಮಲ್ಲಿ ಇರಹೇಳಿದರು. ಹೂ ಎನ್ನಲೇಬೇಕಾಯಿತ್ತು. ಆದರೆ ಹೆಂಗಸು ಹಾಗೆಯೇ ತಿಂದುಂಡು ಇರಬೇಕು ಹೇಗೆ? ಬರಬರುತ್ತ ಅಡಿಗೆನೀರಿನಲ್ಲಿ ನೆರವಾಗತೊಡಗಿದೆ. ಅವರ ತಾಯಿ ತೀರ ನಿಶ್ಯಕ್ತರಾದರು. ನಾನೇ ಅಡಿಗೆಯನ್ನು ಕೈಕೊಂಡೆ. ಇದೆಷ್ಟೋ ಸೊಗಸಾದ ಇರುವಿಕೆ ಎಂದುಕೊಂಡೆ. ಅವರು ಬಹಳ ಒಳ್ಳೆಯ ಮಂದಿ—ನಾನೋ ಕೆಲಸ ಮಾಡಿ ಅದಕ್ಕೆ ಸರಿಗೂಳು ಪಡೆಯುತ್ತಿದ್ದೆ. ಹಿಂದಿನದೆಲ್ಲ ಮರೆಯಲು ಕೂಡ ಸಿದ್ಧಳಾಗಿದ್ದೆ. ಈ ಯಜಮಾನರ ತಾಯಿ ಇರುತ್ತಿರುತ್ತ ಜೀರ್ಣರಾದರು—ಕಡೆಗೊಮ್ಮೆ ಕಾಲ ನುಂಗಿತು ಅವರನ್ನು.

ಹಡೆದ ತಾಯಿಯನ್ನು ಕಳೆದುಕೊಂಡ ಕಣ್ಣೀರನ್ನು ನಾನೂ ಇಟ್ಟೆ. 'ಎಲ್ಲ ಹಿರಿಯರಾಗಿ ನೀವು ನಮ್ಮನೆ ನೋಡಿಕೊಂಡು ಇದ್ದು ಬಿಡಿರಿ' ಎಂದರು ರಾಯರು 'ಛೇ, ನಾನೂ ಚಿಕ್ಕವಳೇ, ನಿಮ್ಮ ಮನೆಯವರ ಸರಸಮಾಸಳು, ಮೊದಲಿದ್ದಂತೆ ನಿಮ್ಮ ಸೇವೆಯಲ್ಲಿ ನಿಮ್ಮುಪಕಾರ ನೆನೆಸುತ್ತ ಇರುವೆ' ಎಂದೆ ಹಾಗೆಯೇ ಸಾಗಿತು. ಒಮ್ಮೆ ರಾಯರ ಹೆಂಡತಿ ಬಾಣಂತನಕ್ಕಾಗಿ ತವರ್ಮನೆಗೆ ಹೋದರು. ನಾನೇ ಮಾಡುವೆನೆಂದೆ, ಆದರೆ ತಾಯಿಯ ಕರಳು ಹೆಚ್ಚಿನದಲ್ಲವೆ? ಮೊದಲಿನ ಎರಡು ಸಣ್ಣಮಕ್ಕಳೂ ಹೋದರು. ನಾನೂ ಹೋಗಿಬಿಡುವೆನೆಂದೆ. ಯಜಮಾನರೂ ಯಜಮಾನತಿಯೂ ಕೂಡಿಯೇ ತಮ್ಮ ಸಲಿಗೆಯ ಒತ್ತಾಯದಿಂದ ಇರಿಸಿಬಿಟ್ಟರು. 'ಇಷ್ಟು ದಿನ ಹೊಟ್ಟೆಹಿಡಿದವರನ್ನು ಅಡಚಣಿಯಲ್ಲಿ ನೂಕಿ ಹೋಗುವದೇ?' ಎಂದು ಇರತೊಡಗಿದೆ. ತಿಂಗ

ಳಾಯ್ತು, ಗಂಡು ಹುಟ್ಟಿದ ಸುದ್ದಿ ಬಂದಿತು. ರಾಯರು ಹಿಗ್ಗಿದರು. ಆದರೂ ಏಕೋ ಮುದುಡಿಕೊಂಡು 'ಬರಲಿಕ್ಕೆ ಮೂರು ನಾಲ್ಕು ತಿಂಗಳ ಬೇಕಲ್ಲ, ಇನ್ನೂ' ಎಂದರು. 'ಹೌದು, ಅವರಿಲ್ಲದೆ ಮನೆಯೆಷ್ಟು ಭಣಭಣ ಸುರಿಯುತ್ತದೆ!' ಎಂದು ನಾನಂದೆ. ಒಬ್ಬಳೇ ಇದ್ದು ಇದ್ದು ನನ್ನಲ್ಲಿ ಇಲ್ಲದ ಬೇಸರ ಹುಟ್ಟಿತು, ನಿದ್ದೆ ಸೊನ್ನೆಯಾಗಹತ್ತಿತು. ಹುಚ್ಚುಚ್ಚು ವ್ಯಥೆಗಳು ಮುತ್ತಿದವು. ಒಂದು ರಾತ್ರಿ ನಾನೇಕೆ ಹೋಗಿಬಿಡಬಾರದು ಎಂದೆ ಆದರೆ ನನ್ನ ಸಂಕಟ ನನಗೆ. ಯಾವದೂ ಬಗೆಹರಿಯದೆ ಇದ್ದೆ. ದೇವರಿಗೆ ನೂರಾರು ನಮಸ್ಕಾರ ಹಾಕಿ ಪಾರು ಮಾಡೆಂದೆ. ಜಗ್ಗುತ್ತ ಜಗ್ಗುತ್ತ ಹಾಗೇ ಇದ್ದೆ. ರಾಯರೂ ಹುಚ್ಚರಂತೆ ಮಾಡುತ್ತ ಹೇಗೋ ಇದ್ದರು. ಒಮ್ಮೆ ತಣ್ಣೀರು ಜಳಕ, ಒಮ್ಮೆ ಬಿಸಿನೀರು, ಒಮ್ಮೆ ಎರಡೂ ಇಲ್ಲ. ಮಡಿವಂತರ ಈ ಬಗೆ ವಿಚಿತ್ರವೆನಿಸಿತು. ಒಂದು ಕಟ್ಟಿರುಳು ನಾನೆಲ್ಲ ಕೆಲಸ ತೀರಿಸಿಕೊಂಡು ಹಾಸಿಗೆ ಗುರುಳಿದೆ. ರಾಯರು ಅಟ್ಟಕ್ಕೆ ಹೋದರು. ರಾತ್ರಿ ಒಂದೆರಡಾಯ್ತು. ನಿದ್ದೆ ಜಪ್ಪೆಂದರೂ ಬರಲೊಲ್ಲದು. ಕೂಡಲೆ ಅಟ್ಟ ಇಳಿದ ಕಾಲಸಪ್ಪಳವಾಯ್ತು....ನನ್ನೆದೆ ಹಾರತೊಡಗಿತು....ಬುದ್ಧಿ ಜಾರಿತು....ಸಾವನ್ನೋ ಯಾರನ್ನೋ ಅಪ್ಪಿದೆ........ತಿಂಗಳ ಮೇಲೆ ತಿಂಗಳು ಏಳುತ್ತ ಬೀಳುತ್ತ ನಡೆಯಿತು—ಯಜಮಾನತಿ ಹಡೆದೆದ್ದು ಬಂದರು, ಆದರೆ ಮೊದಲಿನ ಯಜಮಾನತಿ ಇರಲಿಲ್ಲ. ನನ್ನೊಡನೆ ಮಾತಿಲ್ಲದಾಯ್ತು. ಸಿಟ್ಟುಸಿಡುಕಿನ ಸೊಗಡು ತಾಕಿತಾಕಿ ಬಹಳಾಯ್ತು ನನಗೆ. ನನ್ನೊಳಗಿನ ಬೇಗೆಯೂ ನನಗೆ ಮಿಗಿಲಾಯ್ತು. ಅವರು ಬಂದ ವಾರವೊಂದರಲ್ಲಿ 'ನಾನು ಹೋಗುತ್ತೇನೆ' ಎಂದು ರಾಯರಿಗಂದೆ. ಹೋಗಗೊಡಲಿಲ್ಲ. 'ಕಡಿಗೆ' ನಿಂತಿತು. ಎಲ್ಲರಿಗೆ ಗೊತ್ತಾಯಿತು. ಈಗಂತೂ ಯಜಮಾನತಿ ದುಮುದುಮು ಉರಿಯಹತ್ತಿದಳು. ಆದರೆ ಏನೂ ಅನ್ನಲಾರಳು. ಒಂದುದಿನ 'ನೀವು ಅಡಿಗೆ ನೀರು ಮಾಡಬೇಡಿರಿ, ನಾನೆಲ್ಲ ಮಾಡಿಕೊಳ್ಳುತ್ತೇನೆ' ಎಂದರು ಆಗಲಿ ಎಂದಾಕೆಯೇ ರಾಯರಿಗೆ ತಿಳಿಸದೆ ಹೊರಬಿದ್ದೆ. ಬಾವಿಕೆರೆಯಲೆದಾಡಿದೆ. ನನ್ನ ಕೊನೆಯ ಕ್ಷಣ ಬಂದಿತೆಂದೆ. ಆದರೆ ಆಗಲೆ ಆಪ್ತರು ನನ್ನನ್ನು ಹುಡುಕಿಕೊಂಡು ಬಂದು ನನ್ನ ಮಲ

ಮಕ್ಕಳನ್ನು ಉಡಿಯಲ್ಲಿ ಹಾಕಿ ಸಾಕೆಂದರು. ಒಲ್ಲೆನಲಾಗಲಿಲ್ಲ. ಹಾಗೇ ಇರುತ್ತ ಹೊಟ್ಟೆಯು ಸಲುವಾಗಿ ಯಾಚಿಸಿದೆ. ಅದೇ ನನ್ನ ಹೆಸರು ಎಲ್ಲರ ಬಾಯಲ್ಲಿ —ನನ್ನ ಕಡೆಗೆ ಎಲ್ಲರ ಕಿಡಿಗಣ್ಣು. ಹೇಗಾದರೂ ಮಾಡಿ ನನ್ನನ್ನು ಅನ್ನನ್ನ ನೀರುನೀರು ಮಾಡಬೇಕೆಂದು ಲೋಕವೇ ಎದ್ದಿತು. ನಾನು ತಪ್ಪುಗಾರ್ತಿಯಾದೆ, ಅದೂ ನಿಜ. ಆದರೆ ಏಕೋ ಹೆದರಲಿಲ್ಲ, ಬಾಳುವ ಬಿಸಿರಕುತವು ನನ್ನ ನಾಡಿಗಳಲ್ಲಿ ಆಡ ಹತ್ತಿತು. ಎಲ್ಲ ಆಧಾರ ತಪ್ಪಿತು, ಮತ್ತೆ ಒಬ್ಬಳೇ ಆದೆ. ಸಾವಿನ ಯೋಚನೆಯನ್ನು ನದಿಬಡೆದು ಯಮುನ ನೀರಿಗೆ ಕಳುಹಿದೆ. ಇರಬೇಕು, ಇದ್ದು ನೋಡಬೇಕೆಂದೆ. ನಾನೀಗ ಹೆಸರಾದ ಹೆಂಗಸು. ಎಲ್ಲಿ ಹೋಗಿ ಚಾಕರಿಗಾಗಿ ಬಾಯ್ತೆರೆದರೂ ಏನಾದರೊಂದು ನೆವದಿಂದ ನನ್ನ ನಟ್ಟುತ್ತಿದ್ದರು. ಹಿಂದೆಹಿಂದೆ ನಗೆಯಾಡುತ್ತಿದ್ದರು. ಅವೆಲ್ಲ ನನಗೆ ತಂತಿಯಿಲ್ಲದ ತಾರಿನಿಂದ ತಿಳಿಯುತ್ತಿದ್ದವು. 'ಇಷ್ಟೇಕೆ ಹೊಟ್ಟೆಯುಬ್ಬಿದೆಯೋ ಇವಳದು?' 'ಉದರರೋಗವಾಗಿರಬೇಕೇಳು.' 'ಉಳಿದೊಂದು ನೀರೆಯನ್ನು ಹೊಟ್ಟೆಗೆ ಬಿಗಿದಿದ್ದಾಳೇಳೇ. ಆದರೂ ಅಲೆದಾಡಿದೆ, ಬರೀ ನೀರು ತಂದು ನಾಲ್ಕು ಕೊಡಕ್ಕೊಂದು ಬಿಲ್ಲಿ ತಗೊಳ್ಳುವೆನೆಂದೆ. ಎಲ್ಲೆಲ್ಲಿಯೂ ಯಾರೂ ಕೇಳಲಿಲ್ಲ. ಲೋಕವೆಲ್ಲ ಹಿಂದಾಡಿತು, ಮುಂದೆ ಬಂದಾಗ ನೂಕಿತು. ಸಾಯುವಂತಾಯ್ತು, ಸಾಯಲಿಲ್ಲ.''

೫

''ಮೈಯಲ್ಲಿ ಹೊಕ್ಕು ಬೆಳೆದ ಎಳೆಮೈಯು ಹೊರಬೀಳುವವರೆಗೆ ಒಬ್ಬ ಪುಣ್ಯಾತಗಿತ್ತಿ ಒಕ್ಕಲಗಿತ್ತಿಯಲ್ಲಿ ಇದ್ದೆ. ಬಂಜೆಯಾದ ಅವಳಿಗೆ ಸಾಕಿ ಸಲುಹಲು ಆ ದೇಹ ಕೊಟ್ಟೆ. ನಾನು ನಿರಂಬಳಳಾಗಿ ಬೆಳೆದ ಕೂದಲುಗಳನ್ನು ಹಾಗೇ ಬೆಳಿಸಿ ಕೆನ್ನೀರ ನೀರೆಯನ್ನು ಬಿಸುಟಿದೆ, ಮುತ್ತೈದೆಯ ನೀರೆಯುಟ್ಟೆ. ಅದೇ ಊರಲ್ಲಿ ಆ ಗೆಳತಿಯ ನೆರವಿನಿಂದ ಒಂದು ಕೋಣೆ ಹಿಡಿದು, ಹೇಗೋ ಹಣವಿಲ್ಲದೆಯೂ ಹೆಣ್ಣಾಪೋಡಿಯ ಅಸ್ತ್ರಗಳನ್ನೆಲ್ಲ ಕಲೆಹಾಕಿದೆ. ಒಂದು ಮಂಚ, ನಿಲುವುಗನ್ನಡಿ, ಸುಗಂಧ ದ್ರವ್ಯಗಳು, ಮೋಜಿನ ಕಾಲ್ಮೊರೆ ಮೊದಲಾದುವು. ಈಗ ನಾನು ವೇಶ್ಯೆ. ಮೊದಲೆಂದೂ ಹಾಡದ ಕೊರಳು ಈಗ ಗುಣುಗುಣಿಸಹತ್ತಿತು,

ಮೊದಲು ಡೊಂಕದ ಹುಬ್ಬು ಮಣಿಯದ ಮೈಯು ಈಗ ಎಷ್ಟು ಸೊಗಸ ಮೆರುಗಿ ಹೊಡೆಯುತ್ತಿದ್ದವು.......ನಾನು ಇಲ್ಲದ ಚೆಲುವೆಯಾದೆ. ಕನ್ನಡಿಯಲ್ಲಿ ವೀಳ್ಯಮೆದ್ದ ತುಟಿಯ ಕೆಂಪನ್ನೂ ಎಣ್ಣೆ ಒಸೆಯುವ ನೀರಾದ ಕುರುಳುಗಳನ್ನೂ ನೋಡಿನೋಡಿ ನನಗೆ ನಾನೇ ಮುದ್ದಿಡುವಂತಾದೆ. ನನ್ನ ಮೈಯೇ ನನ್ನ ದೇವರು, ನನ್ನ ಗುಡಿ, ನನ್ನ ಸುಖವಿಲ್ಲಿಯೇ ಇರಲು ಅವರೇಕೆ, ಇವರೇಕೆ ಎಂದುಕೊಂಡೆ. ಆದೇ ಗೆಳತಿಯ ಗುರುತಿನ ಅನೇಕ ಗಂಡಾಳುಗಳು ಮಾತುಕತೆಗೆ ಬಂದು ವೀಳ್ಯಮೆದ್ದು ಹೋದರು. ನನ್ನ ಸರೀಕರಲ್ಲಿ ನಾನು ಓಡಾಡತೊಡಗಿದೆ; ನನ್ನ ಚಿಂತೆಗಳೆಲ್ಲ ಚಿತೆಯೇರಿದವು. ಇದನ್ನೇ ಮೊದಲೇಕೆ ಮಾಡಲಿಲ್ಲ? ಮೈ ಜುಮ್ಮೆಂದಿತು. ಹಾಗೆನಬಾರದಿತ್ತು ಎನಿಸಿತು. ಆದರೆ ಹಾಗೆನಿಸಿತಲ್ಲ, ಅದಕ್ಕೇನು ಮಾಡಲಿ? ನನ್ನ ಸೇವೆಯನ್ನು ಸ್ವೀಕರಿಸಲಿಕ್ಕೆ ಸದ್ಗೃಹಸ್ಥರು ಬಂದುಹೋದರು. ನಾನು ರೊಕ್ಕಸ್ಥಳಾದೆ. ಪ್ರೇಮವನ್ನು ಕೊಟ್ಟೆ, ತಗೊಂಡೆ, ನನಗೊಂದು ಬಾಳು ಎಂಬದಾಯ್ತು. ಇದಕ್ಕೆ ದುಃಖವಿಲ್ಲದೆ ಇಲ್ಲ, ಆದರೆ ಯಾವ ಸುಖವು ದುಃಖದ ಜತೆಯಿಲ್ಲದೆ ಆದೆ? ದುಃಖಕ್ಕೆ ನಾನು ಸೋಲಲಿಲ್ಲ, ಸುಖಕ್ಕೆ ತುಂಬ ಮನಸೋತೆ. ನನ್ನ ಸುಖವು ನನಗೆ ದೊರೆತ ಸ್ಥಿತಿ, ನೆಲೆ. ಹೀಗೇ ವರುಷ ದಾಟಿತು ಒಂದು ರಾತ್ರಿ ಗೆಳತಿಯು ಓರ್ವ ಹಿರಿಯತರದ ಯಜಮಾನರನ್ನು ನನ್ನೆಡೆಗೆ ಕಳಿಸಿಕೊಟ್ಟಳು. ಅವರನ್ನು ಕೂಡಿಸಿ ಎಲ್ಲ ವೇಶ್ಯಾಪರಿಪಾಠದಂತೆ ಮಾತುಕತೆ ನಡೆಯಿತು. ಅವರು ತಮ್ಮ ಕತೆ ಹೇಳತೊಡಗಿದರು. ‘ನಾನು ಮುದುಕನಂತೆ ನಿಮಗೆ ತೋರೀತು. ಆದರೆ ನಾನು ಹಿಂದಿನಕಾಲದವನು. ನನ್ನಲ್ಲಿ ಹರೆಯದವರನ್ನು ವಿಚಾರಿಸುವ ಉಕ್ಕು ಇದೆ. ಅಲ್ಲ, ಇದನ್ನು ನಾನು ಹೇಳಬಾರದು. ಆದರೂ....’’

‘ಸರಿ, ನೀವು ಬಹಳ ಸಂಪನ್ನರೇ ಆಗಿರಬೇಕು. ನಮ್ಮಂಥ ಪಾಮರರ........’

‘ಛೇ, ಎಲ್ಲಿಯ ಸಂಪತ್ತಿ? ಇದ್ದೇನೆ ಹೀಗೆ’

‘ಸರಕಾರದಲ್ಲಿ ದೊಡ್ಡ ನೌಕರಿಯು ತಮಗೆ ಇರಬಹುದು?’

'ಇತ್ತು ಆ ತರದ ಚಾಕರಿಯೊಂದು —ಈಗ ನನಗೆ ಪಿಂಚಣಿ —ಪೆನ್ಶನ್ನು'

'ಹೀಗೋ' ಎಂದೇಕೋ ನಾನು ಬೆಚ್ಚಿಬಿದ್ದೆ.

'ನನ್ನ ಸಂಸಾರ ಹರಕುಮುರಕಾಗಿದೆ. ಒಬ್ಬ ಹೆಂಡತಿ ಸತ್ತಳು. ಅವಳೆರಡು ಮಕ್ಕಳಿವೆ.'

ಯಾಕೋ ನನಗೆ ಮರೆತಕಾಲದ ಸುರಳಿ ಸನ್ನಿದಿರು ಬಿಚ್ಚಿದಂ ತಾಯ್ತು.

'ಈಗ, ಮುದುಕನಾದರೇನಾಯ್ತು, ಒಂದು ಎಳೆಹುಡುಗಿಯನ್ನು ಹಣಕೊಟ್ಟು ತಂದಿರುವೆ, ಮಕ್ಕಳುಮರಿ ನೋಡಿಕೊಂಡು ಹೋಗಲು ಅದು ಇದೆ....ಆದರೆ ಚಿಕ್ಕತನ........'

ನನಗೆ ತಡೆಯದಾಯ್ತು. 'ದಯವಿಟ್ಟು ತಾವು ಈಗಲೇ ಹೊರಟು ಹೋಗುವಿರಾ?' ಎಂದೆ.

'ನಾನೇನು ಪುಕ್ಕಟೆಯೆಂದು ಬಂದಿರಲಿಲ್ಲ' ಎಂದು ಅವರು ಕಾಲ್ತೆಗೆದರು. ನನ್ನ ನೆನಪು ಹುಚ್ಚಾಪಚ್ಚೆಯಾಗಿ ಕುಣಿತವನ್ನೆಸಗತೊಡ ಗಿತು. ತಲೆ ದಿಮ್ಮೆಂದು 'ಈಗ ಅವರು ಇದ್ದರೆ ...ಅಯ್ಯೋ' ಎಂದು ಕೂಗಿ ನೆಲಕ್ಕೆ ಬಿದ್ದುಬಿಟ್ಟೆ.''

* * * * *

ಹತ್ತುಹದಿನೈದು ದಿನಗಳಿಂದ ವೇಶ್ಯೆಯು ಹೊರಬಾಗಿಲಕ್ಕೆ ಬೀಗ ಹಾಕಿಸಿ ತಾನು ಒಳಗೆ ಇರತೊಡಗಿದಳು. ನೆನಪು ನೂರುವರ್ಷದಿಂದ ಬಂದ ನೆರೆಯಂತೆ ಎಲ್ಲ ಕೊಚ್ಚಿಕೊಂಡು ಧುಮ್ಮಿಕ್ಕುತ್ತಿತ್ತು. ಎಚ್ಚರ ದಲ್ಲಿಯೂ ನಿದ್ದೆಯಲ್ಲಿಯೂ ಬಡಬಡಿಕೆ ಹೆಚ್ಚಾಯಿತು. ಇನ್ನಿವಳು ಇರಲಾರಳೆಂದು ಗೆಳತಿ ಗಾಬರಿಯಾದಳು. ಅವಳ ನಚ್ಚಿನ ಜನರೆಲ್ಲ ಮುಂಬಾಗಿಲದ ವಿಚಿತ್ರತೆ ನೋಡಿ ದಿಗಿಲಿನಿಂದ ಹಿಂದಿರುಗುತ್ತಿದ್ದರು. ಒಂದು ರಾತ್ರಿ ಎಂದಿಲ್ಲದ ಸದ್ದು ಎಲ್ಲಕಡೆಗೆ; ಬೆಳದಿಂಗಳು ಒಳನುಗ್ಗು ತ್ತಿದೆ. ಚಟಕ್ಕನೆ ಆಕೆ ಎದ್ದು ಕುಳಿತಳು. ಮೊದಲಿನ ನಾವನೋವು ಅಳಿದು ನೆನವೊಂದು ಉಜ್ವಲವಾಗಿ ಶಾಂತಿಯನ್ನು ಕೂಡಿಕೊಂಡು ಬಂದಿತ್ತು. ಆಗ ಆಕೆ ತಾನು ವಿತಂತು-ವೇಶ್ಯೆಯೆಂಬ ವೇಷದಲ್ಲಿ

ಮೊದಲಿನಿಂದ ಆವರೆಗಿನ ಜೀವನ ಸಂಗತಿಗಳನ್ನು ತನ್ನ ಜೀವದಿದಿರು ಆಣೆಮಾಡಿ ಹೇಳಿದಂತೆ ತನ್ನಲ್ಲಿ ಉಸುರಿಕೊಂಡಳು. ಅದೇ ಅವಳು ತನಗೆ ತಾ ಹೇಳಿದ ಮೇಲಣ ಕತೆ.

ರಾತ್ರಿ ಹೆಚ್ಚಾಯಿತು, ನೆನವು ಮುದುಡಿತು, ಮುಂದಣ ಹಾದಿ ಸಾವೇ, ಇರವೇ ?–ಎಂದು ತೂಗಾಡುತ್ತ ತೂಗಾಡುತ್ತ ಕೊನೆಗೆ 'ಇರವೇ !' ಎಂದು ಅವಳು ಗಟ್ಟಿಯಾಗಿ ಕೂಗುವ ಹೊತ್ತಿಗೆ ಹೊರದನಿಯೊಂದು 'ಸಾನಿಯುವರಿರುವರೇ ?' ಎಂದು ಕೇಳಿತು. 'ಇರುವರಿರುವರು !' ಎನ್ನುತ್ತ ಬೇಗದಿಂದ ಹೋಗಿ, ಅವಳು ಬೀಗದ ಕೈಯನ್ನು-ಕಿಡಕಿಯಲ್ಲಿ ಕೈಹಾಯಿಸಿ ಆ ವ್ಯಕ್ತಿಗೆ ಕೊಟ್ಟು 'ಸನ್ನಿರವಿನ ಬಾಗಿಲವಿದೀಗ ನಿಜವಾಗಿ ಹೊಸದಾಗಿ ತೆರೆಯುತ್ತಿದೆ' ಎಂದು ನಿಂತಳು.

---

# ರಮೇಶ

ರಮೇಶನು ತನ್ನ ಕೈಯಲ್ಲಿದ್ದ ಕಾಗದವನ್ನು ಮೂರನೆಯ ಸಾರಿ ಓದಿದನು. ಮೊದಲನೆಯ ಸಾರಿ ಆ ಕಾಗದವನ್ನು ಓದಿದಾಗ ತಾನು ಸ್ವಪ್ನದಲ್ಲಿದ್ದಿರಬಹುದೆಂದು ಅವನು ತಿಳಿದುಕೊಂಡಿದ್ದನು. ಆದುದರಿಂದ ಅವನು ಅದನ್ನು ಎರಡನೆಯ ಸಾರಿ ಓದಿದನು. ಆದರೂ ಆ ಕಾಗದದಲ್ಲಿ ಬರೆದಿದ್ದ ಶಬ್ದಗಳು ಯಾವ ಬದಲಾವಣೆಯನ್ನಾದರೂ ಪಡೆಯದೆ ಹೋದುವು. ಇದನ್ನು ದೃಢಪಡಿಸುವುದಕ್ಕೋಸ್ಕರವೇ ಅವನು ಮೂರನೆಯ ಬಾರಿ ಆ ಕಾಗದವನ್ನು ಅತಿ ಜಾಗರೂಕತೆಯಿಂದ ಓದುತ್ತಿದ್ದನು. ಅದನ್ನು ಓದುವಾಗಲೆಲ್ಲಾ ಅವನ ಕೈಬೆರಳುಗಳು ಉತ್ಸುಕತೆಯಿಂದ ಅಲುಗಾಡುತ್ತಿದ್ದುವು. ಅವನ ಹೃದಯದಲ್ಲಿ ರಕ್ತವು ಬಹಳ ರಭಸದಿಂದ ಹರಿಯಲಾರಂಭಿಸಿತು. ಆಶ್ಚರ್ಯವಲ್ಲವು! ಏಕೆಂದರೆ, ಚಿರಕಾಲವೂ ಒಂದೇ ಬಗೆಯ ಅಚ್ಚುಪಡಿಯಂತಿರುವ ಹೋಟೇಲಿನ ಊಟವನ್ನು ಅಂದು ಅವನು ೧೧ ಗಂಟೆಗೆ ಉಂಡು, ತನ್ನ ಬಾಡಿಗೆಯ ಕೋಣೆಯೊಳಗೆ ಸೇರಿದೊಡನೆಯೇ, ಟಪ್ಪಾಲು ಪೇದೆಯು ಅವನ ಕೈಯಲ್ಲಿ ಕೊಟ್ಟ ಆ ಕಾಗದದಲ್ಲಿ ಈ ರೀತಿಯಾಗಿ ಬರೆದಿತ್ತು:—

ಎಮ್. ಶ್ಯಾಮಸುಂದರರಾವ್, ಮಂಗಳೂರು,
ಹೈಕೋರ್ಟ ವಕೀಲ್. ತಾ. ೧೩ನೇ ಫೆಬ್ರುವರಿ ೧೯೧೮.

ಪ್ರಿಯರೇ,

ನಿಮ್ಮ ದೊಡ್ಡತಂದೆಯವರಾದ ಮ. ರಾ. ರಾ. ಮೂಡುಬೈಲ್ ರಾಮರಾಯರು ಮುಂಬಯಿಯಲ್ಲಿ ನಿನ್ನೆ ಬೆಳಿಗ್ಗೆ ಫಕ್ಕನೇ ತೀರಿಹೋದ ಸಮಾಚಾರವು ನಿಮಗೆ ಇಷ್ಟರೊಳಗೆ ತಿಳಿದಿರಲಿಕ್ಕೆ ಸಾಕು. ಆದರೆ

ಅವರು ತಮ್ಮ ಜೀವನಮಾನದಲ್ಲಿ ಗಳಿಸಿದ ರೂ. ೫೦,೦೦೦ವನ್ನೆಲ್ಲಾ ನಿಮ್ಮ ಹೆಸರಿನಲ್ಲಿ ವೀಲುಮಾಡಿದ್ದಾರೆಂಬ ಸಂಗತಿಯಾದರೂ ನಿಮಗೆ ತಿಳಿದಿರಲಿಕ್ಕಿಲ್ಲವೆಂದು ನಂಬುತ್ತೇನೆ ಈ ವೀಲಿನ ಪ್ರಕಾರ ಕೀರ್ತಿಶೇಷ ರಾಮವರ ಹಣದ ವಿಲೇವಾರಿಯನ್ನು ಮಾಡಲಿಕ್ಕೆ ನೀವು ಈ ಕಾಗದ ವನ್ನು ಕಂಡಕೂಡಲೇ ಇಲ್ಲಿಗೆ ಹೊರಟು ಬರಬೇಕೆಂದು ಈ ಮೂಲಕ ಸೂಚಿಸುತ್ತೇನೆ.

ಇತಿ ತಮ್ಮ ವಿಧೇಯ,

ಎಮ್. ಶ್ರಾ ಮುಸುಂಪರರಾವ್

ಉ—ಪುರದ ತಾಲೂಕು ಕಚೇರಿ ಗುಮಾಸ್ತರಾದ:—

ಮ. ರಾ. ರಾ. ಮೂಡುಬೈಲ್ ರಮೇಶರಾಯರಿಗೆ.

ಐವತ್ತುಸಾವಿರ ರೂಪಾಯಿ! ಸಾಧಾರಣ ಆರು ತಿಂಗಳಿಂದೀಚೆಗೆ ಪ್ರತಿದಿನವೂ—ರಜಾದಿನಗಳೆಂದು ಕೂಡ ಲೆಕ್ಕಿಸದೆ ಬೆಳಿಗ್ಗೆ ೭ತ್ತಿ ಗಂಟೆ ಯಿಂದ ರಾತ್ರಿ ೯ ಗಂಟೆಯ ವರೆಗೆ ಆ ಹೊಲಸು ತಾಲೂಕು ಕಚೇರಿ ಯಲ್ಲಿ ಕೆಲಸಮಾಡಿ ತಿಂಗಳಿಗೆ ಬರೇ ರೂ. ೨೫ನ್ನು ಗಳಿಸುತ್ತಿದ್ದ ರಮೇ ಶನ ತಲೆಯು ತಿರುಗಿತು. ಐವತ್ತುಸಾವಿರ ರೂಪಾಯಿ! ರಮೇಶನು ಲೋಕದಲ್ಲಿ ಜೀವಿಸುತ್ತಿದ್ದನೋ ಇಲ್ಲವೋ ಎಂಬ ಸಂಗತಿಯನ್ನು ಕೂಡ ಅರಿತುಕೊಳ್ಳಲಿಕ್ಕೆ ಇಷ್ಟಪಡದ ಅವನ ದೊಡ್ಡತಂದೆಯು ಈಗ ಅವನ ಧನ ವನ್ನೆಲ್ಲಾ ನಿಜವಾಗಿಯೂ ರಮೇಶನಿಗೆ ಬಿಟ್ಟುಕೊಟ್ಟಿದ್ದನೇ? ರಮೇಶನು ಕನಸಿನಲ್ಲಿಯೂ ಕೂಡ ಇಂತಹ ಭಾಗ್ಯಪ್ರಾಪ್ತಿಯನ್ನು ಯೋಚಿಸಲಾರ ದಿದ್ದನು.

ಅನೇಕ ವರ್ಷಗಳ ಹಿಂದೆ—ರಮೇಶನು ತೀರಾ ಚಿಕ್ಕವನಾಗಿ ದ್ದಾಗ— ರಮೇಶನ ಗರೀಬನಾದ ತಂದೆಯೂ, ದೊಡ್ಡಸ್ಥಿತಿಯಲ್ಲಿದ್ದ ಅವನ ದೊಡ್ಡತಂದೆಯೂ ಯಾವುದೋ ಒಂದು ಕಾರಣಾಂತರದಿಂದ ಜಗಳವಾಡಿ ಒಬ್ಬನ ಮುಖವನ್ನು ಕೂಡ ಇನ್ನೊಬ್ಬನು ನೋಡುವು ದನ್ನು ಬಿಟ್ಟಿದ್ದರು. ಆಮೇಲೆ ಕೆಲವು ತಿಂಗಳುಗಳಲ್ಲಿಯೇ ರಮೇಶನ ತಂದೆಯು ಪ್ರಾಣಾಂತಿಕಾವಸ್ಥೆಯಲ್ಲಿದ್ದಾಗ —ರಮೇಶನ ತಾಯಿ ಮೊದಲೇ ತೀರಿಹೋಗಿದ್ದಳು—ಅವನು ತನ್ನ ಸಹೋದರನನ್ನು ರಮೇಶನ

ಲಾಲನೆಪಾಲನೆಗಾಗಿ ಎಷ್ಟು ಬೇಡಿಕೊಂಡಿದ್ದರೂ ಆ ಕಲ್ಲೆದೆಯುಳ್ಳ ಪುಣ್ಯಾತ್ಮನು ತನ್ನ ಐಶ್ವರ್ಯದ ಮದದಿಂದ ಅದಕ್ಕೆ ಒಪ್ಪದೆ ಇರಲಾಗಿ, ರಮೇಶನಿಗೂ ಅವನ ದೊಡ್ಡತಂದೆಗೂ ಇದ್ದ ಋಣಾನುಸಂಬಂಧವು ಅಂತೆಯೇ ಕಡಿದುಬಿಡಲ್ಪಟ್ಟಂತಾಯಿತು. ಆ ಮೇಲೆ ರಮೇಶನು ಹೇಗಾದರೂ ಮಾಡಿ ಅನೇಕ ಕಷ್ಟಪರಂಪರೆಗಳಲ್ಲೇ ಬೆಳೆದು, ಕೆಲವರು ಉದಾರ ಮನಸ್ಸಿನವರು ಅವನ ಮೇಲೆ ಕರುಣೆಯಿಂದ ಚಾಚಿದ ಕೈಗಳನ್ನು ಬಿಗಿಯಾಗಿ ಹಿಡಿದುಕೊಂಡು, ಸ್ಕೂಲ್ ಫೈನಲ್ ಪರೀಕ್ಷೆಯ ವರೆಗೆ ಚುರುಕುತನದಿಂದ ಕಲಿತುಕೊಂಡು ಆ ಪರೀಕ್ಷೆಯಲ್ಲಿ ಉಚ್ಚರೀತಿಯಿಂದ ತೇರ್ಗಡೆ ಹೊಂದಿದವನಾಗಿ ಈಗ್ಗೆ ಸುಮಾರು ಆರು ತಿಂಗಳುಗಳಿಂದ ಉದಕಪುರದ ತಾಲೂಕು ಕಚೇರಿಯಲ್ಲಿ ರೂ. ೨೫ರ ಒಂದು ಗುಮಾಸ್ತಿಕೆಯನ್ನು ಸೋಡಿಕೊಂಡು, ಒಬ್ಬಂಟಿಗನಾದ ತನ್ನ ಉದರ ಪೋಷಣೆಯನ್ನು ಹೇಗಾದರೂ ಸಾಧಿಸಿಕೊಳ್ಳುತ್ತಿದ್ದನು.

ಇದಕ್ಕೆ ಪೂರ್ವದಲ್ಲಿ ರಮೇಶನ ಕೈಯಲ್ಲಿ ಒಮ್ಮೊಮ್ಮೆ ಒಂದು ಕಾಸು ಕೂಡ ಇಲ್ಲದೆ ಅನೇಕಸಾರಿ ಉಪವಾಸ ಮಾಡುವಲ್ಲಿಗೆ ಕೂಡ ಬಂದಿದ್ದಾಗ ಅವನು ಬೇರೆ ಉಪಾಯವಿಲ್ಲದೆ ಆಗಾಗ್ಗೆ ತನ್ನ ದೊಡ್ಡ ತಂದೆಗೆ ಒಂದಿಷ್ಟು ಸಹಾಯಕ್ಕಾಗಿ ಮೊರೆಯಿಟ್ಟು ಬರೆಯುತ್ತಿದ್ದನು. ಆದರೆ ಅವನ ಇಂತಹ ಪ್ರಯತ್ನಗಳೆಲ್ಲವೂ ನಿಷ್ಫಲವಾಗುತ್ತಿದ್ದುವೆಂದು ನಾವು ಪ್ರತ್ಯೇಕವಾಗಿ ಹೇಳಬೇಕಾದುದಿಲ್ಲ. ಅಂತಹ ರಮೇಶನಿಗೆ ಅಂತಹ ಅಪೂರ್ವ ಸಹತೆಯ ಅವನ ದೊಡ್ಡತಂದೆಯಾದ ರಾಮರಾಯನು ನಿಜವಾಗಿಯೂ ಈಗ ತನ್ನ ರೂ. ೫೦,೦೦೦ವನ್ನೆಲ್ಲಾ ಬಿಟ್ಟುಕೊಟ್ಟನೇ? ನಂಬಲಿಕ್ಕೆ ಸಾಧ್ಯವಿಲ್ಲ. ಆದರೆ ನಂಬಲಿಕ್ಕಸಾಧ್ಯವಾದ ಈ ಸಂಗತಿಯನ್ನೇ ರಾಮರಾಯನ ವಕೀಲರಾದ ಶ್ಯಾಮಸುಂದರರಾಯರ ಕಾಗದವು ಸಂಶಯವಿಲ್ಲದೆ ಧೃಢಪಡಿಸುತ್ತಿದೆಯಲ್ಲ! ತನ್ನ ಇಡೀ ಜೀವಮಾನದಲ್ಲಿ ತನಗೆ ಮಕ್ಕಳುಮರಿ ಇಲ್ಲದಿದ್ದರೂ ಕೂಡ ತನ್ನ ಸಹೋದರನ ತಪ್ಪಿಗಾಗಿ ಅವನ ಮಗನ ಕೂಡೆ ನಿಷ್ಠುರತೆಯಿಂದ ವರ್ತಿಸಿದ ರಾಮರಾಯನು ಈಗ ಮರಣಾಂತರದಿಂದ ತನ್ನ ಋಣಾನುಸಂಬಂಧವನ್ನು ರಮೇಶನೊಂದಿಗೆ ಫಕ್ಕನೇ ಬೆಳೆಸಿದನೋ? ನಿಜವಾಗಿಯೂ ಲೋಕದ ವ್ಯವಹಾರವು ಬಹಳ ವಿಚಿತ್ರವಾದುದು.

ಐವತ್ತು ಸಾವಿರ ರೂಪಾಯಿ! ಸಹಕಾರಿ ಬೇಂಕಿನಲ್ಲಿಟ್ಟರೆ ವರ್ಷಂ ಪ್ರತಿ ಬರುವ ಬಡ್ಡಿಯೇ ಮೂರು ಸಾವಿರ ರೂಪಾಯಿಗಳಿಗಿಂತಲೂ ಮಿಕ್ಕಿ ಹೋಗುತ್ತಿದೆಯಲ್ಲ! ತಿಂಗಳಿಗೆ ಇನ್ನೂರೈವತ್ತು ರೂಪಾಯಿಗಳಿಗಿಂತಲೂ ಹೆಚ್ಚಾಗುತ್ತಿದೆಯಲ್ಲ! ಮನೆಯಲ್ಲಿ ಏನೂ ಮಾಡದೆ, ಕೂತಲ್ಲಿಯೆ ಸಿಗುವ ಈ ಇನ್ನೂರೈವತ್ತು ರೂಪಾಯಿಗಳೆಲ್ಲಿ! ಆ ಹಾಳು ತಾಲೂಕು ಕಚೇರಿಯಲ್ಲಿ ಅಹೋರಾತ್ರಿ ದುಡಿದು ಸಿಗುತ್ತಿರುವ ಇಪ್ಪತ್ತೈದು ರೂಪಾಯಿಗಳೆಲ್ಲಿ?

ಸ್ವರ್ಗಸುಖದಂತೆ ತೋರಿಬರುತ್ತಿರುವ ಇಂತಹ ಪ್ರತೀಕ್ಷೆಯನ್ನು ಮನಸ್ಸಿನಲ್ಲಿ ಗ್ರಹಿಸಿಕೊಂಡಾಕ್ಷಣವೇ, ರಮೇಶನು ತನ್ನಲ್ಲಿ ಉಕ್ಕಿಬರುವ ಮನೋಲ್ಲಾಸವನ್ನು ತಾಳಲಾರದೆ, ಹುಚ್ಚನಂತೆ ಅಲ್ಲಿದ್ದ ಮೇಜಿನ ಸುತ್ತುಮುತ್ತು ಓಡಿದನು ನಾಲ್ಕೈದು ಸಾರಿ ಮೇಜಿನಿಂದ ಕೆಳಗೆ ಧುಮುಕಿದನು, ಪಟ್ಟು ಬಾರಿ ನೆಲದ ಮೇಲೆ ಲಾಗಹೊಡೆದನು. ದೂರದಲ್ಲಿ ಕಸಗುಡಿಸುತಿದ್ದ ದೂಮನು ರಮೇಶನ ವಿಚಿತ್ರವಾದ ಈ ನಡತೆಯನ್ನು ನೋಡಿ, ಅಲ್ಲಿಯೇ ಸ್ತಬ್ಧನಾಗಿ ನಿಂತನು.

ರಮೇಶನು ಅವನನ್ನು ನೋಡಿ "ದೂಮಾ, ಇಲ್ಲಿ ಬಾ" ಎಂದು ಕರೆದನು. ಅರ್ಥಗರ್ಭಿತವಾದ ಮುಗುಳ್ನಗೆಯ ಸಮೇತನಾಗಿ ದೂಮನು ಆ ಕ್ಷಣವೇ ರಮೇಶನ ಹತ್ತಿರ ಹೋಗಲಿಕ್ಕೆ ವಿಶೇಷ ಕುತೂಹಲ ಪಡಲಿಲ್ಲ.

"ದೂಮು, ದೂಮು! ಇಲ್ಲಿ ಬರುತ್ತೀಯೋ ಇಲ್ಲವೋ?" ಎಂದು ರಮೇಶನು ತನ್ನ ಸ್ವರವನ್ನು ಏರಿಸಿ ಗದರಿಸಿ ಕೇಳಿದನು.

ದೂಮುನಿಗೆ ರಮೇಶನು ಅರಚಿದಂತೆ ಕೇಳಿತು; ಭಯದಿಂದ ಅವನ ಕೂದಲು ಗರಿಗಳಂತೆ ಅವನ ತಲೆಯ ಮೇಲೆ ಸೀಟಾಗಿ ನಿಂತಿತು. ಅವನ ಕಣತಲೆಯಲ್ಲಿ ಬೆವರಿನ ಹನಿಗಳು ಯಥೇಷ್ಟವಾಗಿ ಬಂದಿಳಿದುವು. ತನ್ನ ಸುತ್ತುಮುತ್ತಲೂ ಬಹಳ ಜಾಗರೂಕತೆಯಿಂದ ನೋಡುತ್ತಾ ದೂಮನು ರಮೇಶನ ಬಳಿಗೆ ಮೆಲ್ಲಮೆಲ್ಲನೆ ಸರಿದನು.

"ದೂಮಾ, ನಿನ್ನ ಕೈ ಬೆಚ್ಚಗೆ ಮಾಡದೆ ಅನೇಕ ದಿವಸಗಳಾದುವು, ಇಗೋ!"

ದೂಮನು ಚಾಚಿದ ಕೈಯಲ್ಲಿ ರೂಪಾಯಿಯ ನಾಣ್ಯವೊಂದು ಮಿಂಚಹತ್ತಿತು.

" ಇದೇನು ಸ್ವಾಮಿ, ತಮಗೆ ಗೋವೆಯ ಸೋಡ್ತಿಯಲ್ಲಿ ದೊಡ್ಡ ಬಹುಮಾನವೇನಾದರೂ ಸಿಕ್ಕಿದೆಯೋ ? "

ದೂಮನು ರಮೇಶನನ್ನು "ತಾವು" ಎಂದು ಸೂಚಿಸಿದುದು— ಅನೇಕ ದಿವಸಗಳಿಂದ ಇದೇ ಮೊದಲನೆಯ ಸಾರಿ. ಕೈಯಲ್ಲಿದ್ದ ನಾಣ್ಯವು ದೂಮನಿಗೆ ಅವನ ಸಹಜವಾದ ಸ್ಥಾನವನ್ನು ಒಲವಾಗಿ ತಿಳಿಸಿಕೊಟ್ಟಿ ತೆಂದು ಗ್ರಹಿಸಬೇಕಾಗಿದೆ.

ದೂಮನಲ್ಲಿ ಹಣದಿಂದುಂಟಾದ ಈ ವಿಚಿತ್ರ ಪರಿಣಾಮವನ್ನು ನೋಡಿ, ರಮೇಶನು ಗಟ್ಟಿಯಾಗಿ ನಕ್ಕುಬಿಟ್ಟನು. "ದೂಮಾ, ನಿನ್ನ ಯಜಮಾನನನ್ನು ಈಗಲೇ ನನ್ನಲ್ಲಿಗೆ ಕರೆದುಕೊಂಡು ಬಾ."

" ಸ್ವಾಮಿ, ೧೧ ಗಂಟೆ ಆಗಲೇ ಆಗಿಹೋಗಿದೆ. ತಾವು ಈವೊತ್ತು ಕಚೇರಿಗೆ ಹೋಗುವುದಿಲ್ಲವೇನು ? "

"ಕಚೇರಿ ಹಾಳಾಗ! ನಿನಗೆ ಹೇಳಿದ ಕೆಲಸವನ್ನು ಕೂಡಲೆ ಮಾಡು."

" ತಾವೇ ಅವರ ಹತ್ತಿರ ಹೋಗಿ ಮಾತನಾಡಬಾರದೋ ? "

" ಎಲಾ, ಅಧಿಕಪ್ರಸಂಗಿ! ನೀನು ಆ ಹೊಟೇಲ್ ಮಾಲಕನನ್ನು ಈಗಲೇ ಕರೆದುಕೊಂಡು ಬರುತ್ತೀಯೋ ಇಲ್ಲವೋ ? "

ದೂಮನು ಇನ್ನೊಂದು ಮಾತೆತ್ತದೆ ಅಲ್ಲಿಂದ ಮಾಯವಾದನು. ರಮೇಶನು ವಕೀಲರ ಕಾಗದವನ್ನು ಮತ್ತೊಂದು ಬಾರಿ ಓದಿ, ಅದನ್ನು ಬಹಳ ಜಾಗ್ರತೆಯಿಂದ ತನ್ನ ಜುಬ್ಬದ ಜೇಬಿನಲ್ಲಿಟ್ಟುಕೊಂಡನು. ಆ ಮೇಲೆ ಒಂದು ಕುರ್ಚಿಯ ಮೇಲೆ ಕುಳಿತು, ತನ್ನ ಕಾಲುಗಳನ್ನು ಉದ್ದ ವಾಗಿ ಚಾಚಿಕೊಂಡು, 'ಹಿಂದೂ' ದೈನಿಕ ಪತ್ರಿಕೆಯನ್ನೋದುವು ದರಲ್ಲಿ ಮಗ್ನನಾದನು.

ಸ್ವಲ್ಪ ಸಮಯದಲ್ಲಿಯೇ ಮೇಘಶ್ಯಾಮ ವರ್ಣನಾದ ಹೊಟೇಲ್ ಮಾಲಕನು, ತನ್ನ ನುಣುಪಾದ ಲಂಬೋದರವನ್ನು ತನ್ನ ಮುಂದೆ ಅಟ್ಟಿಕೊಂಡು, ರಮೇಶನ ಮುಂದೆ ಬಂದು ನಿಂತನು. ಸಂಪೂರ್ಣವಾಗಿ

ತೆರೆಯಲ್ಪಟ್ಟ ಆ 'ಹಿಂದೂ' ಪತ್ರಿಕೆಯೊಳಗಿಂದ, ಎರಡು ಕಾಲುಗಳನ್ನು ಹೊರಕ್ಕೆ ಚಾಚಿದ ವಿಚಿತ್ರವಾದ ವ್ಯಕ್ತಿಯನ್ನು ನೋಡಿ, ಅವನು ಸ್ವಲ್ಪ ಬೆರಗಾದನು. "ಇದೇನು, ರಮೇಶರಾಯರೇ, ನನ್ನಲ್ಲಿ ನಿಮಗಿರಬಹುದಾದ ಅಷ್ಟು ಜರೂರಿನ ಕೆಲಸವೇನು?" ಎರಡು ಕಾಲುಗಳಿದ್ದ ಆ 'ಹಿಂದೂ' ಪತ್ರಿಕೆಯು ಮಾತನಾಡಲಾರದೆ ಹೋಯಿತು.

"ರಮೇಶರಾಯರೇ?.........ಏನು?.........ರಮೇಶರಾಯರೇ! ನನ್ನ ಸಮಯಕ್ಕೆ ಬೆಲೆಯುಂಟು. ರಮೇಶರಾಯರೇ!"

"ಆಂ!—ಯಾರದು?—ನೀವೋ? ಇಗೋ, ಕೇಳಿ. ನಿಮ್ಮ ಹುಣಿಸಿಲ್ಲದ ಸಾರನ್ನೂ, ಖಾರವಿಲ್ಲದ ಮೇಲೋಗರಗಳನ್ನೂ, ಪಿಂಡಕ್ಕೆ ಮಾತ್ರ ಯೋಗ್ಯವಾಗಿರುವ ಅನ್ನವನ್ನೂ ಉಂಡು ಉಂಡು ಬೇಸರಹತ್ತಿದೆ. ಇನ್ನುಮುಂದೆ ಹಾಗಾಗದ ಹಾಗೆ ನೋಡಿಕೊಳ್ಳಿ—ಅಷ್ಟೇ!"

ನೀಲವರ್ಣನಾದ ಹೊಟೇಲ್ ಮಾಲಿಕನು ಇದನ್ನು ಕೇಳಿ, ನೇರಳೆ ವರ್ಣವನ್ನು ತಾಳಿಕೊಂಡನು. "ಎಲ—ಎಲ—ಎಲಾ! ನಮ್ಮ ಹೊಟೇಲಿನ ಊಟ ಉಂಡು ಬೇಸರ ಹತ್ತಿದೆಯೋ?........(ತಕ್ಕು ವಿನಯದ ಕಂಠದಿಂದ) ಮಹಾಸ್ವಾಮಿ, ಘೋರ ತಪ್ಪಾಯಿತು, ಕ್ಷಮಿಸಬೇಕು. ಆದರೆ ತಮ್ಮಿಂದ ನನಗೆ ಮೂರು ತಿಂಗಳಿನ ಬಾಬ್ತು ಬರತಕ್ಕದ್ದು ಇನ್ನೂ ಬಾಕಿ ಉಂಟೆಂಬುದನ್ನು ಮಾತ್ರ ಜ್ಞಾಪಕದಲ್ಲಿಟ್ಟುಕೊಳ್ಳಿ! ನಮ್ಮ ಊಟದಿಂದ ಬೇಸರ ಹತ್ತಿದರೆ ಆ ಬಾಕಿಯನ್ನು ನನ್ನಮುಂದೆ ಈಗಲೇ ಇಟ್ಟು, ಬೇರೆ ಹೊಟೇಲನ್ನು ಈ ಕ್ಷಣವೇ ತಮ್ಮಾಶ್ರಯದಿಂದ ಪವಿತ್ರವನ್ನಾಗಿ ಮಾಡಲಿಕ್ಕೆ ನನ್ನಡ್ಡಿಯೇನೂ ಇಲ್ಲ—"

"ಎಷ್ಟು ಮಾತೋ, ನಿಮಗೆ? ನಿಮಗೆ ಸಲ್ಲಬೇಕಾದ ಹಣವೆಷ್ಟು? ಬೇಗನೆ ಹೇಳಿ; ಈಗಲೇ ಕೊಡುವೆನು."

ಮೇಘಶ್ಯಾಮನು ಕೂಡಲೆ ಗುಣಿಸತೊಡಗಿದನು. ಬಾಯಿಯಿಂದ ಏನೋ ಮಣಮಣವೆಂದು ಪಠಿಸಿ, ಊಟಕ್ಕೆ ೧೨ ರೂಪಾಯಿ ಪ್ರಕಾರ ೩ ತಿಂಗಳು........೩೬ ರೂಪಾಯಿ; ಕೋಣೆಯ ಬಾಡಿಗೆ ೧೨ ರೂ........ಬಿಸಿನೀರಿಗೆ........ರಾತ್ರಿ ಹಾಲಿಗೆ........" ಕಡೆಗೆ ದೊಡ್ಡ ಸ್ವರದಿಂದ, "ಒಟ್ಟಿಗೆ ೫೧ ರೂಪಾಯಿ ೬ ಆಣೆ ೮ ಪೈ" ಎಂದನು.

ರಮೇಶನಿಗೆ ತನ್ನ ಹತ್ತಿರ ಅಷ್ಟು ಹಣವಿರಬಹುದೋ? ಎಂಬ ಸಂಶಯವುಂಟಾಯಿತು. ಆದರೂ ಅವನು ಹಿಂದೆ ಮುಂದೆ ನೋಡದೆ ತನ್ನ ಟ್ರಂಕಿನ ಬಾಗಿಲನ್ನು ಕೂಡಲೇ ತೆರೆದು, ತನ್ನಲ್ಲಿದ್ದ ಹಣವನ್ನು ಲೆಕ್ಕಮಾಡಿದನು. ದೈವವಶಾತ್, ೫೪ ರೂಪಾಯಿ, ೪ ಆಣೆ, ೬ ಪೈ ಇತ್ತು. ರಮೇಶನಿಗೆ ಧೈರ್ಯ ಬಂತು.

"೫೨ ರೂಪಾಯಿ —ಅಷ್ಟೆಯೋ?—ಅಃ" ಎಂದು ೫೨ ರೂ. ನೋಟುಗಳನ್ನು ಹೊಟೇಲು ಮಾಲಕನಿದ್ದೆಡೆಗೆ ಬಿಸಾಡಿದನು. ಮತ್ತು ತನ್ನಲ್ಲಿ ಚಿಲ್ಲರೆಯಾಗಿದ್ದ ೪ ಆಣೆ ೬ ಪೈಗಳನ್ನು ತೆಗೆದುಕೊಂಡು, ಅಲ್ಲಿ ಹಿಂದೆಯೇ ನಿಂತಿದ್ದ ದೂಮುನನ್ನು ನೋಡಿ "ದೂಮಾ, ಇಗೋ ಈ ಚಿಲ್ಲರೆಯಿಂದ ನನಗೆ ಬಹಳ ತೊಂದರೆಯೇ ಸರಿ. ಅದನ್ನು ನೀನು ತಕ್ಕೋ" ಎಂದು ಹೇಳಿ, ಅದನ್ನು ದೂಮುನಿಗೆ ಕೊಟ್ಟನು. ರಮೇಶನಿಗೆ ನಿಜವಾಗಿಯೂ ಹುಚ್ಚು ಹಿಡಿದಿದೆ-ಎಂದು ದೂಮುನು ತಿಳಿದುಕೊಂಡಿದ್ದರೂ, ಆ ಚಿಲ್ಲರೆಯನ್ನು ಸ್ವೀಕರಿಸಲಿಕ್ಕೆ ಅವನು ಲೇಶಮಾತ್ರವೂ ಹಿಂಜರಿಯಲಿಲ್ಲ.

ಅತ್ತ ಆ ಹೊಟೇಲ್ ಮಾಲಕನು ತನಗೆ ಬರಬೇಕಾದ ಹಣವನ್ನು ಕಳೆದು, ಬಾಕಿ ೯ ಆಣೆ ೪ ಪೈಯನ್ನು ರಮೇಶನಿಗೆ ವಾಪಸು ಕೊಡಬೇಕೆಂಬ ಇಚ್ಛೆಯಿಂದ, ತಾನು ಉಟ್ಟುಕೊಂಡಿದ್ದ ಕಾಫಿ ವರ್ಣದ ವಸ್ತ್ರದಲ್ಲಿ ಕಟ್ಟಿದ-ಒಂದು ಚಿಕ್ಕ ಗಂಟಿನ ಕೂಡ, ಬೆವರು ಬರುವ ವರೆಗೆ ಜಡಪಡಿಸುತ್ತಿದ್ದನು. ರಮೇಶನು ಇದನ್ನು ನೋಡಿ, "ನೀವು ಚಿಲ್ಲರೆಗಾಗಿ ಅಷ್ಟು ತೊಂದರೆಪಡುವುದು ಬೇಡ. ನನಗೆ ಆ ಚಿಲ್ಲರೆಯು ಅವಶ್ಯವಿಲ್ಲ." ಎಂದು ಹೇಳಿ ಅವನನ್ನು ಕಳುಹಿಸಿದನು.

ರಮೇಶನ ಹತ್ತಿರ ಈಗ ಉಳಿದುದು ಬರೀ ಎರಡು ರೂಪಾಯಿ. ಮಂಗಳೂರಿಗೆ ಹೋಗುವ ಬಸ್ ಟಿಕೇಟಿಗೆ ಮಾತ್ರ ಸಾಕಾಗಿತ್ತು. ಆದರೂ ರಮೇಶನು ರವೆಯಷ್ಟಾದರೂ ವ್ಯಸನಪಡಲಿಲ್ಲ. ಮಂಗಳೂರಿಗೆ ಹೋದಾಕ್ಷಣವೇ ಅವನ ಪಾಲಿಗೆ ೫೦ ಸಾವಿರ ರೂಪಾಯಿ ಬರುತ್ತಿದೆಯಲ್ಲವೇ? ತನ್ನ ರಿಸ್ಟ್‌ವಾಚನ್ನು ನೋಡಿ, ೧೨ ಗಂಟೆಗೆ ೧೫ ಮಿನಿಟುಗಳಿವೆ ಎಂದು ತಿಳಿದುಕೊಂಡನು. ನಾಟಕದ ಹಾಡೊಂದನ್ನು ಗುಂಯಿಗುಂಯಿ

ಎಂದು ಮನಸ್ಸಿನಲ್ಲಿಯೇ ತಿರುಗಿಸುತ್ತ, ತನ್ನ ಅಂಗಿಯನ್ನು ತೊಟ್ಟು ಕೊಂಡು, ರಮೇಶನು ತಾಲೂಕು ಕಚೇರಿಗೆಂದು ಸಾವಧಾನದಿಂದ ಹೊರಟುಹೋದನು,

೨

೧೨ ಗಂಟೆಯ ಸಮಯ. ತಾಲೂಕು ಕಚೇರಿಯು ಆಗಲೆ ಪ್ರಾರಂಭ ವಾಗಿ ಗುಮಾಸ್ತರೆಲ್ಲರೂ ಅವರವರ ಸ್ಥಾನದಲ್ಲಿ ಕುಳಿತುಕೊಂಡು, ಅವರವರ ಕೆಲಸದಲ್ಲಿ ಮಗ್ನರಾಗಿದ್ದರು. ರಮೇಶನು ಕುಳಿತುಕೊಳ್ಳುವ ಸ್ಥಾನವು ಮಾತ್ರ ಖಾಲಿಯಿತ್ತು. ತಹಶಿಲ್ದಾರರೂ ಬಂದಿದ್ದುದರಿಂದ ಹರಟೆ ಮಾತುಗಳೆಲ್ಲವೂ ನಿಂತುಬಿಟ್ಟಿದ್ದುವು. ಲೇಖನಿಗಳ ಗಿರಿಗಿರಿ ಶಬ್ದ, ಕಾಗದದ ಹಾಳೆಗಳನ್ನು ಮಗುಚುವ ಪರಪರ ಶಬ್ದ; ಪೇದೆಯೊಬ್ಬನು ತಹಶಿಲ್ದಾರರಿಗೋಸ್ಕರ ಪಂಕವನ್ನು ಎಳೆಯುವ ಕಿರೀಕಿರೀ ಶಬ್ದ; ಇವು ಗಳ ಹೊರತು ಆ ಕಚೇರಿಯಲ್ಲಿ ಎಲ್ಲವೂ ನಿಶ್ಶಬ್ದವಾಗಿತ್ತು. ಕಚೇರಿಯ ಒಂದು ಮೂಲೆಯಿಂದ ಇನ್ನೊಂದು ಮೂಲೆಗೆ ಕಾಗದದ ದಪ್ಪವಾದ ಕಟ್ಟುಗಳನ್ನು ಒಯ್ಯುತ್ತಿದ್ದ ಪೇದೆಗಳು ಸಹ ಪ್ರೇತಗಳಂತೆ ಸದ್ದಿಲ್ಲದೆ ಸಂಚರಿಸುತ್ತಿದ್ದರು. ಆದರೆ ಗುಮಾಸ್ತರಲ್ಲಿ ಒಬ್ಬಿಬ್ಬರು ನಶ್ಯವನ್ನು ಸೇದುತ್ತ ಕಚೇರಿಯಲ್ಲೆಲ್ಲಾ ಮಹಾ ಉಪಟಳವನ್ನು ಎಬ್ಬಿಸುತ್ತಿದ್ದ ರೆಂಬುದೇನೋ ನಿಜವು.

ರಮೇಶನೂ ಕಚೇರಿಯೊಳಕ್ಕೆ ಬಂದನು. ಅವನ ಬರುವಿಕೆಯನ್ನು ತಹಶಿಲ್ದಾರರು ಕನ್ನಡಕದ ಅಂಚಿನ ಮೇಲಿನಿಂದ– ತೀಕ್ಷ್ಣದೃಷ್ಟಿಯಿಂದ ನೋಡಿದರು. ಇದು ರಮೇಶನಿಗೆ ಗೊತ್ತಿದ್ದರೂ ಅವನು ಅದನ್ನು ಎಳ್ಳಷ್ಟಕ್ಕೂ ಲಕ್ಷಿಸದೆ, ಆ ಕ್ಷಣವೇ ಎರಡು ಇಂಚು ಉದ್ದ ಬೆಳೆದವ ನಂತೆ ರಾಜಠೀವಿಯಿಂದ ಹೆಜ್ಜೆಗಳನ್ನಿಡುತ್ತಾ, ಗುಮಾಸ್ತರಿರುವ ಕೊಠ ಡಿಗೇ ನೆಟ್ಟಗೆ ಹೋಗಿ, ತನ್ನ ಕುರ್ಚಿಯಲ್ಲಿ ಕುಳಿತನು. ಅಲ್ಲಿದ್ದ ಗುಮಾಸ್ತರೆಲ್ಲರ ದೃಷ್ಟಿಯು ಅವನ ಕಡೆಗೆ ತಿರುಗಿತು.

ರಮೇಶನು ತಾನು ಕೆಲಸ ಮಾಡುವ ಸ್ಥಳದಲ್ಲಿ ಕುಳಿತು ಕೊಂಡರೂ ಯಾವ ಕೆಲಸವನ್ನು ಮಾಡುವ ಇಚ್ಛೆಯನ್ನೂ ತೋರಿಸದೆ, ತಾನು ಕೂತುಕೊಂಡ ಕುರ್ಚಿಯನ್ನು—ಅದರ ಹಿಂದಿನ ಎರಡು ಕಾಲು

ಗಳ ಮೇಲೆ ಸಿಲ್ಲಿಸಿ, ಹಿಂದಿರುವ ಗೋಡೆಯವರೆಗೆ ಅದನ್ನು—ಹಿಂದೆಮುಂದೆ ತೂಗುತ್ತಾ, ಗುಮಾಸ್ತರೆಲ್ಲರೂ ಅವನ ಕಡೆಗೆ ತಿರುಗಿಸಿದ ಭೀಕರ ದೃಷ್ಟಿಯನ್ನು ತನ್ನ ಮೋಹನಕರವಾದ ಮಂದಹಾಸದಿಂದ ಎದುರುಗೊಂಡನು.

ಇದನ್ನು ನೋಡಿ ಅವನ ಹತ್ತಿರದಲ್ಲಿದ್ದ ಗುಮಾಸ್ತನೊಬ್ಬನು ಅವನ ಕಿವಿಯಲ್ಲಿ "ಈವೊತ್ತೇನು ನಿನಗೆ ಹುಚ್ಚು ಹಿಡಿದಿದೆಯೆ?" ಎಂದು ಕಿಶಿಬಿಶಿಯಾಗಿ ಕೇಳಿದನು. ಅದಕ್ಕೆ ರಮೇಶನು "ಹುಚ್ಚು? ಹುಚ್ಚು ನನಗಲ್ಲ—ನಿಮಗೆ! ಬೆಳಗ್ಗೆ ೭ ಗಂಟೆಯಿಂದ ರಾತ್ರಿ ೯ ಗಂಟೆಯ ವರೆಗೆ ಗಾಣದ ಎತ್ತುಗಳಂತೆ ಕೆಲಸ ಮಾಡುತ್ತಿರುವ ನಿಮಗೆ ಹುಚ್ಚು! ಈ ಹಾಳು ಕಚೇರಿಯ ಕೆಲಸ ಮಾಡುವುದಕ್ಕಿಂತಲೂ ದಿನಗೂಲಿಯಾಗಿ ಬಾಳುವುದು ಎಷ್ಟೋ ಲೇಸು!" ಎಂದು ಸ್ವಲ್ಪವಾದರೂ ದಾಕ್ಷಿಣ್ಯವನ್ನಿಡದೆ ಎಲ್ಲರೂ ಕೇಳುವಂತೆ ಗಟ್ಟಿಯಾಗಿ ಒದರಿದನು.

ಇದರ ಪರಿಣಾಮವು ಭಯಂಕರವಾಗುವುದೆಂದು ತಿಳಿದುಕೊಂಡು ಗುಮಾಸ್ತರೆಲ್ಲರೂ ಚಕಾರ ಶಬ್ದವನ್ನೆತ್ತದೆ, ಅವರವರ ಮೇಜುಗಳ ಮೇಲೆ ಕಾಯಿಪಲ್ಯದಂತೆ ಪಸರಿಸಲ್ಪಟ್ಟ ಕಾಗದದ ಹಾಳೆಗಳಲ್ಲಿ ಅವರವರ ತಲೆಗಳನ್ನು ಅಡಗಿಸಿಕೊಂಡರು. ರಮೇಶನು ಮರುದಿನವೇ ಅರ್ಧಲಕ್ಷಾಧಿಪತಿಯಾಗುವನೆಂದು ಅವರಿಗೇನು ಗೊತ್ತು?

ಸ್ವಲ್ಪ ಸಮಯದಲ್ಲಿಯೇ ಪೇದೆಯೊಬ್ಬನು ರಮೇಶನಿದ್ದಲ್ಲಿಗೆ ಬಂದು "ರಾಯರು ತಮ್ಮನ್ನು ಕರೆಯುತ್ತಾರೆ" ಎಂದನು. ಇದನ್ನು ಕೇಳಿ ಇತರ ಗುಮಾಸ್ತರೆಲ್ಲರೂ ತಲೆಯಲ್ಲಾಡಿಸುತ್ತಾ ಒಬ್ಬರನ್ನೊಬ್ಬರು ನೋಡಿದರು. ಬೇರೆ ಸಮಯದಲ್ಲಿ ಪೇದೆಯ ಬಾಯಿಂದ "ರಾಯರು" ಎಂಬ ಶಬ್ದವು ಹುಟ್ಟುವಷ್ಟರೊಳಗೇ ರಮೇಶನು ಕುರ್ಚಿಯಿಂದ ತಟಕ್ಕನೆ ಎದ್ದು, ರಾಯರಿದ್ದಲ್ಲಿಗೆ ಹೋಗಲಿಕ್ಕೆ ಸಿದ್ಧನಾಗುತ್ತಿದ್ದನು. ಆದರೆ ಆಗ ಅವನಿಗೆ ಐವತ್ತು ಸಾವಿರ ರೂಪಾಯಿಗಳಿಗೆ ಒಡೆಯನಾಗುವ ಸಂಭವವೇನೂ ಇರುತ್ತಿದ್ದಿಲ್ಲ. ಈಗ ಪೇದೆಯು ಹೇಳಿದುದನ್ನು ಬಹಳ ಸಾವಧಾನದಿಂದ ಕೇಳಿ "ನಾನು ಈಗಲೇ ಬರುವೆನೆಂದು ರಾಯರಿಗೆ ತಿಳಿಸು" ಎಂದು ಉತ್ತರವನ್ನು ಕಳುಹಿಸಿದನು.

"ರಾಯರಿಗೆ ಪ್ರತ್ಯುತ್ತರವನ್ನು ಕಳುಹಿಸಿದನೇ? ಎಂತಹ ದುಡು ಕಿದು!" ಎಂದು ಅಲ್ಲಿದ್ದ ಗುಮಾಸ್ತರೆಲ್ಲರೂ ಎಂದುಕೊಂಡು, ರಮೇಶ ನಿಗಾಗಿ ಮನಸ್ಸಿನಲ್ಲಿಯೇ ಬಹಳವಾಗಿ ನೊಂದುಕೊಂಡರು.

ರಮೇಶನು ಎದ್ದುನಿಂತು, ತನ್ನ ತಲೆಯನ್ನು ಎತ್ತರವಾಗಿ ಹಿಡಿದು ಕೊಂಡು, ಸುತ್ತುಮುತ್ತಲೂ ನೋಡಿದನು, "ಇದೇನು, ಈ ಹೊತ್ತು ನಾನೆಲ್ಲಿ ನೋಡಿದರೂ ಸುಟ್ಟ ಮೋರೆಗಳೇ ನನ್ನ ಕಣ್ಣಿಗೆ ಬೀಳುತ್ತವೆ? ಇಂದು ನಿಮಗೆ ಏನಾಗಿದೆ? ರಾಯರಿಲ್ಲದಿರುವಾಗ ನೀವು ಮಾಡುವ ಗಲಭೆಗೆ ಮಿತಿಯೇ ಇರುವುದಿಲ್ಲ! ಆಡುವ ಹರಟೆಗೆ ತುದಿ ಮೊದಲೇ ಇರುವುದಿಲ್ಲ! ಈಗ ಮಾತ್ರ ಮೂಕರಂತೆ ಸುಮ್ಮನೆ ಬಿದ್ದುಕೊಂಡಿ ದ್ದೀರಿ!" ಎಂದು ಹೇಳಿ, ರಾಯರ ಕೋಣೆಗೆ ನೆಟ್ಟಗೆ ಹೋಗಿ, ಅವರು ಕುಳಿತಿರುವ ಕುರ್ಚಿಯ ಹತ್ತಿರವೇ ಇದ್ದೊಂದು ಕುರ್ಚಿಯನ್ನು ತನ್ನ ಕಡೆಗೆ ಸರ್ರನೆ ಎಳೆದುಕೊಂಡು, ಅದರ ಮೇಲೆ ಕುಳಿತುಕೊಂಡನು.

ರಾಯರ ಮುಖವು ಕೆಂಪೇರಿತು. ಗುಮಾಸ್ತರು ಅವರ ಮುಂದೆ ಐದೈದು ತಾಸುಗಳವರೆಗೆ ನಿಂತುಕೊಂಡು ಕಾಲಹರಣ ಮಾಡುವು ದಾದರೂ, ಅವರಿಗೆ 'ಕುಳಿತುಕೊಳ್ಳಿ' ಎಂದು ಹೇಳಿದರೆ, ತನ್ನ ಪದವಿಯ ಗೌರವವು ಹೋದೀತೆಂಬ ಸಿದ್ಧಾಂತವನ್ನವಲಂಬಿಸಿಕೊಂಡಿರುತ್ತಿದ್ದ ಆ ರಾಯರಿಗೆ, ಇಂದು ರಮೇಶನು ಮಾಡಿದ ಕೃತ್ಯವನ್ನು ನೋಡಿ ಕೋಪ ಬಂದುದರಲ್ಲಿ ಆಶ್ಚರ್ಯವೇನು? ರಾಯರ ಮುಂದೆಯೆ ಕುಳಿತುಕೊಳ್ಳ ಲಿಕ್ಕೆ ಹಿಂಜರಿಯದ ರಮೇಶನು ತಹಶಿಲ್ದಾರರಂತಹರ ಪವಿತ್ರಪದವಿಗೆ ನಿಜವಾಗಿಯೂ ಎಂತಹ ಕಳಂಕವನ್ನು ತಂದುಬಿಟ್ಟನು!

ರಾಯರಿಗೆ ಕೋಪ ಬಂದುದನ್ನು ನೋಡಿ ರಮೇಶನು ಮನಸ್ಸಿ ನಲ್ಲಿಯೇ ಹಿಗ್ಗಿಕೊಂಡನು. ಮತ್ತು ಸ್ವಲ್ಪ ಸಮಯದ ಮೇಲೆ ತನ್ನ ಅತ್ಯಂತ ಶಾಂತಸ್ವರದಿಂದ "ನನ್ನನ್ನು ನೀವು ಕರೆಕಳುಹಿಸಿದುದು ಏತಕ್ಕೇ?" ಎಂದು ರಾಯರನ್ನು ಕೇಳಿದನು.

ಇದರಿಂದ ರಾಯರ ಕೋಪವು ಮತ್ತಿಷ್ಟು ಹೆಚ್ಚಿತು. ಅವರಿಗೆ ಕೋಪದ ಆವೇಶದಿಂದ ಫಕ್ಕನೆ ಏನು ಮಾತಾಡಬೇಕೆಂಬುದು ತಿಳಿಯು

ಲಿಲ್ಲ. ಕೊನೆಗೆ ತಮ್ಮ ಕೋಪವನ್ನು ಬಲವಾಗಿ ತಡೆದುಕೊಂಡು, "ಈಗೆಷ್ಟು ಸಮಯವಾಗಿರಬಹುದೆಂಬುದು ನಿಮಗೆ ತಿಳಿದಿದೆಯೋ?" ಎಂದು ಕೇಳಿದರು.

"ನೋಡಿ ಹೇಳುತ್ತೇನೆ" ಎಂದು ರಮೇಶನು ಬಹಳ ಕ್ಷಮೆಯಿಂದ ತನ್ನ ರಿಸ್ಟ್ ವಾಚನ್ನು ನೋಡಿ, "೧ ಗಂಟೆ ೧೬ ಮಿನಿಟು ೩೧ ಸೆಕಂಡು" ಎಂದನು.

"ಕಚೇರಿಯು ೧೧ ಗಂಟೆಗೇ ಪ್ರಾರಂಭವಾಗುತ್ತದೆಂಬುದು ನಿಮಗೆ ಗೊತ್ತಿರಬಹುದು."

"ಹೌದು, ಗೊತ್ತುಂಟು. ಆದರೆ ನೀವು ಹೇಳಿದಂತೆ ಬೆಳಗ್ಗೆ ೭ ಗಂಟೆಯಿಂದ ೧೦ ಗಂಟೆಯವರೆಗೆ ಕೆಲಸ ಮಾಡುವುದಾದರೆ ೧೧ ಗಂಟೆಗೆ ಸರಿಯಾಗಿ ಪುನಃ ಕೆಲಸಕ್ಕೆ ಬರಲಿಕ್ಕೆ ಸಾಧ್ಯವಾಗುವುದಿಲ್ಲ."

ರಾಯರು ಇತರ ಗುಮಾಸ್ತರು ಇರುವಲ್ಲಿ ಬೆರಳು ತೋರಿಸಿ, "ಅವರಿಗೆ ಹೇಗೆ ಸಾಧ್ಯವಾಗುತ್ತದೆ?" ಎಂದು ಕೇಳಿದರು.

"ಅವರಿಗೆ ಸಾಧ್ಯವಾಗಬಹುದು; ನನಗೆ ಸಾಧ್ಯವಾಗುವುದಿಲ್ಲ" ಎಂದು ರಮೇಶನು ಉತ್ತರ ಕೊಟ್ಟನು.

"ಯಾಕೆ?"

"ಯಾಕೆಂಬ ಅಧಿಕಪ್ರಸಂಗವು ನಿಮಗೆ ಬೇಡ. ನಮ್ಮಿಂದ ನೀವು ಕೆಲಸ ಮಾಡಿಸಿಕೊಳ್ಳುವ ಬದಲಿಗೆ ನೀವೇ ಮಾಡಿ ನೋಡಿ. ಆಗ ತಿಳಿಯುವುದು."

"ಯಾರ ಮುಂದೆ ಮಾತಾಡುತ್ತೀರೆಂಬುದನ್ನು ನೆನಪಿಟ್ಟುಕೊಳ್ಳಿ!"

"ಯಾರ ಮುಂದೆ ಮಾತಾಡುತ್ತೇನೆಂಬುದು ನನಗೆ ಚೆನ್ನಾಗಿ ತಿಳಿದಿರುವುದರಿಂದಲೇ ನಾನು ಹೀಗೆ ಮಾತಾಡುತ್ತೇನೆ. ಯಾರ ಮುಂದೆ ಎಂದು ಸ್ಪಷ್ಟವಾಗಿ ವಿವರಿಸಲಿಕ್ಕೆ ನನಗಿಷ್ಟವಿಲ್ಲ."

"ನಾನಿನ್ನೊಮ್ಮೆ ಹೇಳುತ್ತೇನೆ! ಜಾಗ್ರತೆಯಿಂದ ಮಾತಾಡಿ! ಜೋಕೆ! ಫಲವು ವಿಪರೀತವಾಗಬಹುದು!"

" ನಿಮ್ಮ ಬೆದರಿಕೆಗೆ ಹೆದರುವವನಲ್ಲ, ನಾನು. ಜಾಗ್ರತನಾಗಿ ಕಣ್ಣುಗಳನ್ನು ತುಂಬಾ ತೆರೆದಿದ್ದೇನಾಗಿರುವುದರಿಂದಲೇ ಜಾಗ್ರತೆಯಿಂದ ಮಾತನಾಡುತ್ತಿದ್ದೇನೆ. ನೀವೇನೋ ಈ ಹಾಳು ತಾಲೂಕು ಕಚೇರಿಯ ಕೆಲಸಕ್ಕಾಗಿಯೇ ಹುಟ್ಟಿರಬಹುದು. ಆದರೆ ನಾನು ಹಾಗಲ್ಲ; ಆ ಹಾಳು ೨೫ ರೂಪಾಯಿಗಳಿಗಾಗಿ, ಇವರೆಲ್ಲರ ಹಾಗೆ ನಿಮ್ಮ ದಾಸಾನುದಾಸ ನಾಗುವ ಇಷ್ಟವು ನನಗಿಲ್ಲ. "

" ನಿಮ್ಮ ತಲೆಯು ಈಹೊತ್ತು ಸರಿಯುಂಟೋ ? ಅಥವಾ ನೀವು ಕುಡಿದು ಬಂದಿದ್ದೀರೋ ? "

ರಾಯರು ಕೋಪದಿಂದ ಕಿಡಿಕಿಡಿಯಾದರು. ಗುಮಾಸ್ತರು, ಪೇದೆಯವರು ಎಲ್ಲರೂ ಇಂತಹ ಅಪೂರ್ವವಾದ ಸಂಭಾಷಣೆಯನ್ನು ಕೇಳಿ ಸ್ತಂಭಿತರಾದರು.

" ನೀವು ಇನ್ನು ನನ್ನ ಆಫೀಸಿನಲ್ಲಿ ಕೆಲಸ ಮಾಡಬೇಕಾದದ್ದಿಲ್ಲ. ನಿಮ್ಮನ್ನು ಡಿಸ್‌ಮಿಸ್ ಮಾಡಲಿಕ್ಕೆ ಈಗಲೇ ಕಲೆಕ್ಟರ್ ಸಾಹೇಬರಿಗೆ ಬರೆಯುತ್ತೇನೆ. ನೀವು ಇನ್ನು ಇಲ್ಲಿಂದ ಹೋಗಬಹುದು. "

" ರಾಯರೇ, ಅವಸರ ಮಾಡಬೇಡಿ, ಇಕ್ಕೊಳ್ಳಿ, ನಿಮ್ಮ ೨೫ ರೂಪಾಯಿಯ ಹಾಳು ಕೆಲಸಕ್ಕೆ ನನ್ನ ರಾಜೀನಾಮೆಯನ್ನು ನಾನು ಆಗಲೇ ಬರೆದು ತಂದಿದ್ದೇನೆ. " ಎಂದು ರಮೇಶನು ಹೇಳಿ, ತನ್ನ ರಾಜೀನಾಮೆಯನ್ನು ಬರೆದ ಪತ್ರವನ್ನು ರಾಯರ ಮೇಜಿನ ಮೇಲೆ, ಅವರ ಮೂಗಿನ ಕೆಳಗೆ ಬೀಸಾಡಿ, ಕುರ್ಚಿಯಿಂದೆದ್ದು ನಿಂತನು; ಮತ್ತು ಪರಿಹಾಸ್ಯದ ಸ್ವರದಿಂದ, " ರಾಯರೇ, ಇನ್ನು ನನಗೆ ಹೋಗಲಿಕ್ಕೆ ಅಪ್ಪಣೆ ಕೊಡೋಣಾಗಲಿ. ಕಡೆಯ ಸಾರಿ ಹೇಳಿಕೊಳ್ಳುವೆನು........ಏನು, ನನ್ನ ನಮಸ್ಕಾರವನ್ನು ಕೂಡಾ ನನಗೆ ಒಪ್ಪಿಸಲಾರಿರಾ ? ನಿಮ್ಮ ಈ ಅಟ್ಟ ಹಾಸದ ಹೆಗ್ಗಳಿಕೆಗೆ ಬೆಂಕಿ ಬೀಳಲಿ ! " ಎಂದು ಕೂಗಿಕೊಂಡು, ತಾನೇ ರಾಯರೋ ಎಂಬಂತೆ ಗುಮಾಸ್ತರಿರುವ ಕೊಠಡಿಯೊಳಗೆ ಹೋಗಿಬಿಟ್ಟನು.

ರಮೇಶನ ದುಡುಕಿನ ವರ್ತನೆಯನ್ನು ನೋಡಿ ಕಚೇರಿಯ ಗುಮಾಸ್ತರೆಲ್ಲರೂ ಬೆಚ್ಚಿಬಿದ್ದಿದ್ದರು. ಇದನ್ನು ನೋಡಿ ರಮೇಶನಿಗೆ ಗೋಲ್ಡ್‌ಸ್ಮಿತ್ ಎಂಬ ಆಂಗ್ಲೇಯ ಕವಿಯ ಒಂದು ನಾಟಕದೊಳಗಿನ

ಒಂದು ಮಾತು ಹಠಾತ್ತಾಗಿಯೂ ನೆನಪಿಗೆ ಬಂದು, ಅದಕ್ಕನುಸಾರ ವಾಗಿ, "Boys, why do you pop up and stare like frightened rabbits in a warren ?" ಎಂದು ಸಸುನಗುತ್ತಾ ಕೇಳಿದನು; ಆ ಮೇಲೆ ಸ್ವಲ್ಪ ಗಾಂಭೀರ್ಯದಿಂದ "ಮಿತ್ರರೇ, ನಮಗೆ ಬದುಕಬೇಕೆಂಬಾಸೆ ಯಿದ್ದರೆ ನಾನೀಗ ಮಾಡಿದಂತೆಯೇ ಮಾಡಿ, ನಿಮ್ಮ ರಾಯರ ಹೆಮ್ಮೆ ಯನ್ನು ಮುರಿಯುವುದಕ್ಕೆ ಮೊದಲು ಪ್ರಯತ್ನಿಸುವಿರಿ. ಇಲ್ಲವಾದರೆ ನಿಮಗೆ 'ಗೆಲ್ಲಿ ಸ್ಲೇವ' ರ (Galley Slave) ಗತಿಯೇ ಪ್ರಾಪ್ತಿ" ಎಂದು ಹೇಳಿ, ತನ್ನಷ್ಟು ಸುಖಿಯು ಲೋಕದಲ್ಲಿ ಇನ್ನಾರೂ ಇಲ್ಲದಂತೆ ಸಿಳ್ಳು ಹಾಕುತ್ತಾ ಆ ತಾಲೂಕುಕಚೇರಿಯಿಂದ ಹೊರಗೆ ಬಂದನು.

ಆ ದಿನ ತಹಶಿಲ್ದಾರರೂ ಗುಮಾಸ್ತರೂ ರಾತ್ರಿ ಒಂಬತ್ತು ಗಂಟೆಯ ವರೆಗೆ ಕೆಲಸಕ್ಕೆಂದು ಕುಳಿತರೂ, ಕಚೇರಿಯ ಕೆಲಸವು ಅಷ್ಟೇನೂ ವೃದ್ಧಿ ಹೊಂದಲಿಲ್ಲವೆಂದು ನಾವು ಪುನಃ ಹೇಳಬೇಕಾದದ್ದಿಲ್ಲ.

೩

ರಮೇಶನಿಗೆ ಆ ರಾತ್ರಿ ನಿದ್ದೆಯೇ ಹತ್ತಲಿಲ್ಲ. ಸೊಳ್ಳೆಗಳ ಕಾಟ ದಿಂದಾಗಿರಬಹುದೆಂದು ವಾಚಕರು ಹೇಳಬಹುದು. ಸೊಳ್ಳೆಗಳ ಕಾಟ ವಿತ್ತೇನೋ ನಿಜವು. ಆದರೆ ಲೋಕದಲ್ಲಿರುವ ಎಲ್ಲಾ ಸೊಳ್ಳೆಗಳು ಕೂಡಿ, ಅವನ ಮೇಲೆ ಒಮ್ಮೆಯೇ ದಂಡೆತ್ತಿ ಬಂದಿದ್ದರೂ ರಮೇಶನು ಆ ರಾತ್ರಿ ಅದನ್ನು ಲಕ್ಷಿಸಲಾರದವನಾಗಿದ್ದನು. ಅಂದು ಮಧ್ಯಾಹ್ನ ತಾಲೂಕು ಕಚೇರಿಯಲ್ಲಿ ತಹಶಿಲ್ದಾರರ ಕೂಡೆ ಅವನು ಹುಚ್ಚನಂತೆ ವರ್ತಿಸಿದುದಕ್ಕೆ ಅವನು ಲೇಶಮಾತ್ರವೂ ವ್ಯಸನಪಡುತ್ತಿರಲಿಲ್ಲ. ಅವನ ವಿಚಾರವೆಲ್ಲಾ ಅವನ ಮುಂದಿನ ಸದ್ಗತಿಯ ಕಡೆಗೆಯೆ ತಿರುಗಿತ್ತು. ಮರುದಿನವೇ ಅವನಿಗೆ ಸಿಗಬಹುದಾದ ೫೦ ಸಾವಿರ ರೂಪಾಯಿಗಳ ಲ್ಲಿಯೇ ಅವನು ಲೋಲಾಡುತಿದ್ದನು. ಅಂತೇ ಅವನ ನಿದ್ರೆಗೆ ಭಂಗ.

೫೦ ಸಾವಿರ ರೂಪಾಯಿ! ಇಷ್ಟು ಹೇರಳವಾದ ದ್ರವ್ಯದಿಂದ ಯಾವುದನ್ನು ಸಾಧಿಸಲಿಕ್ಕಾಗದು? ಇಷ್ಟು ಹೇರಳವಾದ ದ್ರವ್ಯದ ಸಹಾಯವಿರುವಾಗ ಇನ್ನು ತನ್ನ ಜೀವನವನ್ನು ಯಾವ ರೀತಿಯಲ್ಲಿ ಸಾಗಿಸಬೇಕೆಂಬ ಆಲೋಚನೆಯಲ್ಲಿಯೇ ರಮೇಶನು ಆ ಇಡೀ ರಾತ್ರಿ

ಮಗ್ನನಾದನು. ಅವನ ಮುಂದೆ ಎರಡು ಹೆದ್ದಾರಿಗಳು—ಎರಡೂ ಬಹಳ ಮನೋರಂಜಕವಾಗಿ—ತೆರೆಯುವಂತೆ ಅವನಿಗೆ ತೋರಿಬಂತು.

ಆ ಹಣವನ್ನೆಲ್ಲಾ ಬಡ್ಡಿಗೆ ಹಾಕಿ, ಅದರಿಂದ ವರ್ಷಂಪ್ರತಿ ಬರುವ ಮೂರುಸಾವಿರ ರೂಪಾಯಿಗಳಿಂದ ಜೀವನ ಮಾಡಬಹುದಾದ ಮೊದಲ ನೆಯ ದಾರಿಯು. ಇದರಲ್ಲಿ ಅವನಿಗೆ ಚಿತ್ತಾಕರ್ಷಕವಾಗಿ ತೋರಿದು ದೇನಂದರೆ–ಕುಟುಂಬದಾಸೆಯೇ. ತೀರಾ ಚಿಕ್ಕ ಪ್ರಾಯದಿಂದಲೇ ಒಂಟಿಯಾಗಿ ಜೀವಿಸುತ್ತಿದ್ದ ರಮೇಶನು ಕುಟುಂಬ ಪ್ರೀತಿಗಾಗಿ ಹಂಬ ಲಿಸುತ್ತಿದ್ದುದರಲ್ಲಿ ಆಶ್ಚರ್ಯವೇನು ? ಅನೇಕ ಸಾರಿ ರಾತ್ರಿಯಲ್ಲಿ ನಿದ್ದೆ ಮಾಡುವುದರ ಬದಲಾಗಿ, ತನ್ನ ಸಾರವಿಲ್ಲದ ಜೀವನದ ವಿಷಯಕ್ಕೆ ಅತಿ ರೇಕವಾಗಿ ಪಶ್ಚಾತ್ತಾಪ ಪಟ್ಟು, ಇಡೀ ರಾತ್ರಿಯೆಲ್ಲಾ ಅತ್ತತ್ತು, ಕಣ್ಣೀರಿನಿಂದ ತನ್ನ ಹಾಸಿಗೆಯನ್ನೆಲ್ಲಾ ತೋಯಿಸುತಿದ್ದನು. ತನ್ನಲ್ಲಿ ಅನೇಕ ಕಾಲದಿಂದಲೂ ಬಲವಾಗಿ ನೆಲೆಗೊಂಡಿದ್ದಾ ಲಾಲಸೆಯನ್ನು ದೇವರ ಅನುಗ್ರಹದಿಂದ ಈಗಲಾದರೂ ಸಮಾಧಾನಪಡಿಸಬಹುದೆಂದು ಅವನು ತಿಳಿದುಕೊಂಡಾಕ್ಷಣವೇ ಅವನ ಕಣ್ಣುಗಳಲ್ಲಿ ಆನಂದಬಾಷ್ಪ ಗಳು ಉದ್ಭವಿಸಿದುವು.

ಆದರೆ ರಮೇಶನಲ್ಲಿ ಇನ್ನೊಂದು ಬಯಕೆಯೂ ಬಲವಾಗಿ ನೆಲೆ ಗೊಂಡಿತ್ತು. ಅದೇನೆಂದರೆ, ಒಂದು ಕೋಲೇಜ್ ಡಿಗ್ರಿಯನ್ನು ಪಡೆಯ ಬೇಕೆಂದು. ಅವನ ಆ ವರೆಗಿನ ಸ್ಥಿತಿಗತಿಯಿಂದ ಸಾಧ್ಯವಾಗದೆ ಇದ್ದ ಆ ಮಹದಾಸೆಯನ್ನು ಈಗಲಾದರೂ ಕೈಗೂಡಿಸಲಿಕ್ಕೆ ಅವನಿಗೆ ಸಾಧ್ಯ ವಾಗಿದೆಯಲ್ಲವೇ ? ಇದೇ ಅವನಿಗೆ ಅಂದು ರಾತ್ರಿ ತೋರಿದ ಎರಡನೆಯ ಮನೋರಂಜಕವಾದ ದಾರಿಯು.

ಹೀಗೆಯೇ ರಮೇಶನು ತನ್ನ ಮುಂದಿನ ಸುಖಜೀವನದ ನಾನಾ ವಿಚಾರಗಳನ್ನು ಕಲ್ಪಿಸಿಕೊಂಡು, ಅವನ ಜೀವಮಾನದಲ್ಲಿ ಇನ್ನೂ ಅವನ ಪಾಲಿಗೆ ಬರಬಹುದಾದ ಸುಖವನ್ನೆಲ್ಲಾ ಆ ರಾತ್ರಿಯೇ ತನ್ನ ಮಾನಸಿಕ ರಾಜ್ಯದಲ್ಲಿ ಭೋಗಿಸಿ, ಬೆಳಕು ಯಾವಾಗಾಗುವುದೋ, ಬಸ್ಸಿನಲ್ಲಿ ಕುಳಿತುಕೊಂಡು ಮಂಗಳೂರಿಗೆ ಯಾವಾಗ ತಲುಪಲಿಕ್ಕಾಗುವುದೋ ವಕೀಲ ಶಾಮಸುಂದರರಾಯರಲ್ಲಿಗೆ ಹೋಗಿ ತನ್ನ ದ್ರವ್ಯವಾದ ಆ

೫೦ ಸಾವಿರ ರೂಪಾಯಿಯನ್ನು ಯಾವಾಗ ತನ್ನ ವಶ ಮಾಡಿಕೊಳ್ಳಲಿಕ್ಕಾಗುವುದೋ ಎಂಬ ಚಿಂತನೆಯಿಂದಲೇ ಹೇಗಾದರೂ ಮಾಡಿ, ಆ ರಾತ್ರಿಯನ್ನು ದೂಡಿದನು.

ಬೆಳಕು ಹರಿಯುತ್ತಲೇ ರಮೇಶನು ನಿಶ್ಚಯಿಸಿದ ಹಾಗೆ ಬಸ್ಸಿನಲ್ಲಿ ಪ್ರಯಾಣವನ್ನು ಬೆಳಸಿ, ಹನ್ನೊಂದು ಗಂಟೆಗೆ ಸರಿಯಾಗಿ ಮಂಗಳೂರಿಗೆ ತಲ್ಪಿದನು. ಮಂಗಳೂರಿಗೆಂದು ಹೊರಡುವ ಮುಂಚೆ, ಅವನು ಪ್ರಯಾಣದ ಉತ್ಸುಕತೆಯಿಂದ ಯಾವ ಆಹಾರವನ್ನೂ ತಕ್ಕೊಂಡಿರಲಿಲ್ಲ. ಇದರಿಂದ ಅವನು ಮಂಗಳೂರಿಗೆ ತಲ್ಪುತ್ತಲೇ ಅವನಿಗೆ ಕ್ಷುದ್ಬಾಧೆಯು ಬಹಳ ಹೆಚ್ಚಾಯಿತು. ಬಾಯಾರಿಕೆಯಿಂದಲೂ ಅವನು ಬಹಳವಾಗಿ ಬಳಲಿದನು. ಅಲ್ಲದೆ ಕಳೆದ ಇಡೀ ರಾತ್ರಿ ಅವನಿಗೆ ನಿದ್ದೆಯಿಲ್ಲದಿದ್ದುದರಿಂದಲೂ, ಆ ಮೇಲೆ ಅವನು ಕೈಗೊಂಡ ಬಸ್ಸಿನ ಪ್ರಯಾಣದ ದೆಸೆಯಿಂದಲೂ, ಅವನು ಮೈಯಲ್ಲಿ ಬಹಳ ಆಯಾಸಪಟ್ಟನು. ಆದರೆ ಒಂದು ಕಾಲು ಗಂಟೆಯ ವಿಶ್ರಾಂತಿಯನ್ನಾದರೂ ತೆಗೆದುಕೊಳ್ಳೋಣವೆಂದರೆ ಅಪರಿಚಿತವಾದ ಸ್ಥಳದಲ್ಲಿ ಅವನೆಲ್ಲಿಗೆ ಹೋಗಬೇಕು ? ಅದೂ ಅಲ್ಲದೆ ಅವನಲ್ಲಿದ್ದ ಹಣವೆಲ್ಲವೂ ಖರ್ಚಾಗಿ ಅವನ ಕೈಯಲ್ಲಿ ಒಂದು ಕಾಸು ಕೂಡ ಇದ್ದಿಲ್ಲ. ಆದರೇನು ? ಅವನು ಇನ್ನು ಸ್ವಲ್ಪ ಸಮಯದಲ್ಲಿಯೇ ಐವತ್ತು ಸಾವಿರ ರೂಪಾಯಿಗಳ ಒಡೆಯನಾಗುವನಲ್ಲವೇ ? ಈ ಮಹದಾಸೆಯಿಂದಲೇ ಅವನಿಗೆ ವಿಶೇಷ ಶಕ್ತಿಬಂದಂತಾಗಿ, ಅವನು ಕೂಡಲೇ ವಕೀಲ ಶ್ಯಾಮಸುಂದರರಾಯರ ಮನೆಯನ್ನು ಹುಡುಕಿಕೊಂಡು ಹೋದನು. ಮಾರ್ಗದಲ್ಲಿ ಕೆವನಿಗೆ ಅನೇಕಸಾರಿ ದಾರಿತಪ್ಪಿದರೂ, ಹೇಗಾದರೂ ಮಾಡಿ ಮುಕ್ಕಾಲು ಗಂಟೆಯೊಳಗೆ ಶ್ಯಾಮಸುಂದರ ರಾಯರ ಮನೆಯ ಬಾಗಿಲಿನ ಮುಂದೆ ಬಳಲುತ್ತಾ ಬಂದು ನಿಂತುಕೊಂಡನು.

ಆದರೆ ಮನೆಯೊಳಗೆ ಹೋಗಲಿಕ್ಕೆ ರಮೇಶನಿಗೆ ಫಕ್ಕನೆ ಧೈರ್ಯವಾಗದೆ ಹೋಯಿತು. ಅವನ ಕಾಲುಗಳು ಕಾರಣವಿಲ್ಲದೆ ನಡುಗಲಾರಂಭಿಸಿದುವು. ಅವನ ಹೃದಯವು ಡಬಡಬಯೆಂದು ಶಬ್ದಮಾಡಲಾರಂಭಿಸಿತು. ಅವನ ಕೈಬೆರಳುಗಳು ತಣ್ಣಗಾದುವು.ಅವನ ಮುಖದಲ್ಲಿ

ಬೆವರು ಯಥೇಷ್ಟವಾಗಿ ಬಂದಿಳಿಯಿತು. ಮಾತನಾಡಲಿಕ್ಕೆ ಕೂಡ ಅವನಿಗೆ ಶಕ್ತಿಬಾರದೆ ಹೋಯಿತು. ಈ ಇಡೀ ಪ್ರಕರಣವನ್ನು ಯಾರಾದರೂ ಒಬ್ಬ ಪೋಕರಿಯು ತನ್ನನ್ನು ಪರಿಹಾಸ್ಯಮಾಡಬೇಕೆಂಬ ದುರ್ಬುದ್ಧಿಯಿಂದ ಉಂಟುಮಾಡಿದ್ದಾನೋ ಎಂಬ ಭಯಂಕರವಾದ ಸಂಶಯವು ಅವನ ತಲೆಗೆ ಹತ್ತಿತು. ಈ ಸಂಶಯವು ಅವನಿಗೆ ಬರುತ್ತಲೇ ಅವನ ಮುಖವು ಕಾಗದದ ಹಾಳೆಯಂತೆ ಬೆಳ್ಳಗಾಯಿತು. ಕೂಡಲೇ ತನ್ನ ಜೇಬಿನಲ್ಲಿದ್ದ ಶ್ಯಾಮಸುಂದರರಾಯರ ಕಾಗದವನ್ನು ಸೂಕ್ಷ್ಮವಾಗಿ ಪರೀಕ್ಷಿಸಿದನು. ಆದರೆ ಇದರಿಂದ ಅವನ ಸಂಶಯವು ಕಡಿಮೆಯಾದಂತಾಗಲಿಲ್ಲ. ಕಾಗದವನ್ನು ತನ್ನ ಜೇಬಿನೊಳಗೇ ಜಾಗ್ರತೆಯಿಂದಿಟ್ಟನು. ಇದೆಲ್ಲವೂ ಕಪಟನಾಟಕವಾದರೆ ತಾನು ಅಲ್ಲಿಯವರೆಗೆ ಹೇಗಾದರೂ ಬಂದುದಾಯಿತು. ಈ ಕಪಟನಾಟಕದ ಅಂತ್ಯವನ್ನು ನೋಡದೆ ಹಿಂತಿರುಗಲಾರೆನೆಂದು ರಮೇಶನು ದೃಢವಾಗಿ ಮನಸ್ಸಿನಲ್ಲಿ ನಿಶ್ಚಯಿಸಿದನು. ಮತ್ತು ಅಲ್ಲಿದ್ದೊಬ್ಬ ಹುಡುಗನನ್ನು ನೋಡಿ, "ವಕೀಲರು ಮನೆಯಲ್ಲಿದ್ದಾರೋ?" ಎಂದು ಕೇಳಿದನು. ಹುಡುಗನು "ಇದ್ದಾರೆ" ಎಂದು ಹೇಳಿದಕೂಡಲೇ ರಮೇಶನು ತನ್ನ ಹೆಸರನ್ನು ಆ ಹುಡುಗನಿಗೆ ತಿಳಿಸಿ, ತಾನು ಬಂದ ವಾರ್ತೆಯನ್ನು ವಕೀಲರಿಗೆ ತಿಳಿಸಬೇಕೆಂದು ಅವನನ್ನು ಬೇಡಿಕೊಂಡನು. ಹುಡುಗನು ಕೂಡಲೇ ಮಾಳಿಗೆಗೆ ಹೋದನು. ಅವನ ಬರುವಿಕೆಯನ್ನೇ ನಿರೀಕ್ಷಿಸುತ್ತಾ ರಮೇಶನು ಕೆಳಕ್ಕೆ ನಿಂತನು.

ಕೊಂಚ ಸಮಯದನಂತರ ಹುಡುಗನು ಕೆಳಗೆ ಬಂದಿಳಿದನು. "ವಕೀಲರು ಮಾಳಿಗೆಯಲ್ಲಿದ್ದಾರೆ. ನೀವು ಅಲ್ಲಿಗೆ ಹೋಗಬೇಕೆಂದು ಹೇಳಿದ್ದಾರೆ" ಎಂದು ರಮೇಶನಿಗೆ ಹೇಳಿದನು. ರಮೇಶನು ಮಾಳಿಗೆಯ ಮೆಟ್ಟಲುಗಳನ್ನು ಕೂಡಲೇ ಹತ್ತಿಕೊಂಡು ಮೇಲೆ ಹೋದನು.

ವಕೀಲ ಶ್ಯಾಮಸುಂದರರಾಯರು ರಮೇಶನನ್ನು ಕೊಂಚಸಮಯ ದಿಟ್ಟಿಸಿ ನೋಡಿ, ಅವನಿಗೊಂದು ಕುರ್ಚಿಯನ್ನು ತೋರಿಸಿದರು. ರಮೇಶನು ಅದರಲ್ಲಿ ಕುಳಿತುಕೊಂಡನು. ಶ್ಯಾಮಸುಂದರರಾಯರು ಬಾರಿಬಾರಿಗೂ ರಮೇಶನ ಮುಖವನ್ನೇ ನೋಡಿದರು, ಆದರೆ ಯಾವ

ಮಾತನ್ನೂ ಆಡಲಿಲ್ಲ. ರಮೇಶನ ಕೋಮಲವಾದ ಮುಖವೂ, ವಿಶಾಲ ವಾಗಿದ್ದು ನಿರ್ಮಲವಾದ ಅವನ ಕಣ್ಣುಗಳೂ, ಅವನ ಎಳೆಯ ಪ್ರಾಯವೂ, ಇವುಗಳೆಲ್ಲಾ ಮಕ್ಕಳುಮರಿ ಇಲ್ಲದ ಶ್ಯಾಮಸುಂದರರಾಯರನ್ನು ವಿಶೇಷವಾಗಿ ಮರುಳುಮಾಡಿದಂತೆ ಕಂಡಿತು. ರಮೇಶನಾದರೋ ಶ್ಯಾಮಸುಂದರರಾಯರು ತನ್ನ ಕೂಡೆ ಮಾತನಾಡಲಿಕ್ಕೆ ಯಾತಕ್ಕೆ ಅಷ್ಟು ವಿಳಂಬಮಾಡುತ್ತಿರುವರೆಂದು ತಳಮಳಿಸಲಿಕ್ಕೆ ತೊಡಗಿದನು. ಕೊನೆಗೆ ಧೈರ್ಯವನ್ನು ತಾಳಿ, "ನೀವು ನನ್ನನ್ನು ಇಲ್ಲಿ ಬರಬೇಕೆಂದಾಜ್ಞಾಪಿಸಿ ದಂತೆ ನಾನು ಈವೊತ್ತೇ ಉ—ಪುರದಿಂದ ಹೊರಟು ಬಂದಿದ್ದೇನೆ. ನಿಮ್ಮ ಕಾಗದವನ್ನು ನೋಡಿ" ಎಂದು ರಮೇಶನು ತನ್ನ ಜೇಬಿನಿಂದ ಶ್ಯಾಮ ಸುಂದರರಾಯರು ತನಗೆ ಬರೆದ ಕಾಗದವನ್ನು ಹೊರಗೆ ತೆಗೆದು ಮೇಜಿನ ಮೇಲಿಟ್ಟನು.

ಇದಕ್ಕೆ ಪ್ರತ್ಯುತ್ತರವಾಗಿ ಶ್ಯಾಮಸುಂದರರಾಯರು "ನಿನ್ನ ಮುಖವು ಪ್ರಯಾಣದ ದೆಸೆಯಿಂದ ಬಹಳವಾಗಿ ಬಾಡಿಹೋಗಿದೆ. ನಾವು ಮೊದಲು ಊಟಮಾಡೋಣ. ಆಮೇಲೆ ನೀನು ಬಂದ ಕಾರ್ಯದ ವಿಷಯ ಇಷ್ಟಾನುಸಾರವಾಗಿ ಮಾತನಾಡಬಹುದು" ಎಂದು ತಂದೆಯು ಮಗ ನನ್ನು ಸಂತೈಸುವಂತೆ ಮೃದುಭಾಷಣದಿಂದ ರಮೇಶನಿಗೆ ಹೇಳಿದರು.

ರಮೇಶನಿಗೆ ಇದರಿಂದ ಏನೋ ಸಂಶಯ ಹುಟ್ಟಿತು. ಅವನ ಸಂದೇಹಗ್ರಸ್ತವಾದ ಮನಸ್ಸಿನ ವ್ಯಾಕುಲವು ಮತ್ತಷ್ಟು ಹೆಚ್ಚಿತು. ಕೂಡಲೇ ಕುರ್ಚಿಯಿಂದೆದ್ದು "ನೀವು ನನಗೆ ಹೇಳಿದ ಪ್ರಕಾರ ಇಲ್ಲಿ ಬಂದಿದ್ದೇನೆ. ನಿಮ್ಮ ಮಾತುಗಳಿಂದ ನನ್ನ ಮನಸ್ಸಿನಲ್ಲಿ ವರ್ಣಿಸಲಾಗ ದಂತಹ ವ್ಯಾಕುಲವು ಉಂಟಾಗಿದೆ. ನನಗೆ ಯಥಾರ್ಥವನ್ನೇ ಹೇಳಿ. ನನ್ನ ದೊಡ್ಡತಂದೆಯವರು ತಮ್ಮ ಧನವನ್ನೆಲ್ಲಾ ನಿಜವಾಗಿಯೂ ನನಗೆ ಬಿಟ್ಟಿದ್ದಾರೋ ಇಲ್ಲವೋ? ನೀವು ಏನು ಹೇಳಿದರೂ ನಾನು ಅದನ್ನು ಕೇಳಲಿಕ್ಕೆ ಸಿದ್ಧನಾಗಿದ್ದೇನೆ. ಆದರೆ ದಯಮಾಡಿ ನನ್ನನ್ನು ಇಂತಹ ಭಯಂಕರವಾದ ಸಂದೇಹದಲ್ಲಿಡಬೇಡಿ!"

ಶ್ಯಾಮಸುಂದರರಾಯರು ಕೆಲವು ಸಮಯ ಆಲೋಚಿಸುವವ ರಾದರು. ಆ ಮೇಲೆ ರಮೇಶನನ್ನು ನೋಡಿ, ಹೀಗೆ ಹೇಳಿದರು:—

"ರಮೇಶಾ, ನೀನು ಇನ್ನೂ ಬಾಲಕನು. ನಾನು ನಿನಗೆ ಈಗ ಏನು ಹೇಳಿದರೂ ನೀನು ಕೇಳಲಿಕ್ಕೆ ಸಿದ್ಧನಾಗಿರುವೆ– ಎಂಬ ಅಭಯವನ್ನು ನೀನು ಕೊಟ್ಟಿರುವುದರಿಂದಲೇ ನೀನು ಬಯಸುತ್ತಿರುವ ಯಥಾರ್ಥ ವನ್ನೇ ಹೇಳುತ್ತೇನೆ. ನಾನು ಹೇಳುವುದನ್ನೆಲ್ಲಾ ಸಾವಧಾನದಿಂದ ಕೇಳು. ನಿನ್ನ ದೊಡ್ಡತಂದೆಯವರು ಒಂದು ವರ್ಷದ ಕೆಳಗೆ ಮುಂಬಯಿ ಯಿಂದ ಮಂಗಳೂರಿಗೆ ಬಂದಿದ್ದಾಗ, ಅವರು ತಮ್ಮ ಧನವನ್ನೆಲ್ಲಾ ನಿನ್ನ ಹೆಸರಿನಲ್ಲಿಯೇ ವೀಲುಮಾಡಿದರೆಂಬುದು ನಿಜವೇ. ಆ ವೀಲನ್ನು ನಾನೇ ಬರೆಯಿಸಿದೆನು. ವೀಲುಮಾಡುವಾಗ ತಮ್ಮ ಜೀವಮಾನದಲ್ಲಿ ಈ ಸಂಗತಿ ಯನ್ನು ನಿನಗೆ ತಿಳಿಸಬಾರದೆಂದು ಅವರು ನನಗೆ ಆಜ್ಞಾಪಿಸಿದ್ದರು. ಆದುದರಿಂದ ನಾನು ಇಷ್ಟರವರೆಗೆ ಅದರ ವಿಷಯವಾಗಿ ಮೌನವನ್ನು ತಾಳಿಕೊಳ್ಳಬೇಕಾಯಿತು. ನೀನು ಹಣದ ಸಹಾಯವಿಲ್ಲದೆ ಅಷ್ಟು ಬಳಲುತ್ತಿರುವಾಗ ಕೂಡ, ನಾನು ನಿನ್ನ ವಿಷಯ ಮನಸ್ಸಿನಲ್ಲೇ ನೊಂದು ಕೊಂಡು ಸುಮ್ಮನಿರಬೇಕಾಗಿತ್ತು. ಆದರೂ ನಿನಗೆ ತಿಳಿಯದಂತೆ ನಿನಗೆ ಕೆಲಸವಾಗುವ ಮೊದಲು ನನ್ನಿಂದಾಗುವಷ್ಟು ಸಹಾಯವನ್ನು ನಿನಗೆ ಆಗಾಗ ಮಾಡುತ್ತಿದ್ದೆನು........"

ರಮೇಶನ ಮುಖವು ಅತ್ಯಾಶ್ಚರ್ಯವನ್ನು ಸೂಚಿಸಿತು.

"........ಮೊನ್ನೆ ನಿನ್ನ ದೊಡ್ಡತಂದೆಯವರು ತೀರಿಹೋದ ಸಂಗ ತಿಯು ನನಗೆ ತಿಳಿದಾಕ್ಷಣವೇ ನನ್ನ ಕರ್ತವ್ಯದಂತೆ ಆ ವೀಲಿನ ಸಂಗತಿ ಯನ್ನು ನಿನಗೆ ತಿಳಿಸಿದೆನು........ಆದರೆ........"

"ಆದರೇನು?........ದಯಮಾಡಿ ಬೇಗನೆ ಹೇಳಿ!"

"ಆದರೆ ಅವರು ತೀರಿಹೋಗುವ ಸ್ವಲ್ಪ ಸಮಯದ ಮುಂಚೆ ಅವರು ಆ ವೀಲನ್ನು ರದ್ದುಪಡಿಸಿ, ಇನ್ನೊಂದು ವೀಲನ್ನು ಬರೆದಿಟ್ಟ ಸಂಗ ತಿಯು ನನಗೆ ನಿನ್ನೆ ಸಂಜೆ ಮಾತ್ರ ತಂತಿಯ ಮೂಲಕ ತಿಳಿದು ಬಂತು. ತತ್ಕ್ಷಣವೇ ಈ ಸಂಗತಿಯನ್ನು ನಿನಗೆ ತಿಳಿಸಿ, ನೀನು ಇಲ್ಲಿ ಬರುವುದು ಅನಾವಶ್ಯಕವೆಂದು ನಿನಗೆ ತಂತಿಯನ್ನು ಬಿಟ್ಟೆನು. ದುರ್ದೈವವಶಾತ್ ಆ ತಂತಿಯು ನಿನಗೆ ಸಿಕ್ಕಲಿಲ್ಲವೆಂದು ಕಾಣುತ್ತದೆ........"

"ಇಲ್ಲ........ಸಿಕ್ಕಲಿಲ್ಲ........ಇಲ್ಲದಿದ್ದರೆ....ಇಲ್ಲಿಗೆ ಬರುತ್ತಿದ್ದಿಲ್ಲ. ........ಆ ಬೇರೆ ವೀಲಿನಲ್ಲಿ ಏನಿದೆ ಎಂದು ತಿಳಿದಿರುತ್ತದೋ?"

"ಅವರ ಎಲ್ಲಾ ಧನವನ್ನು ಮಂಗಳಾದೇವಿ ದೇವಸ್ಥಾನಕ್ಕೆ ಬಿಟ್ಟಿದ್ದಾರೆಂದು."

"ಈ ಬೇರೆ ವೀಲಿನಲ್ಲಿ........ಸಂಶಯಗಳೇನಾದರೂ........ಇಲ್ಲವೇನು?" ರಮೇಶನ ಸ್ವರವು ಒಂದು ಪ್ರೇತದಿಂದ ಹೊರಡುವಂತೆ ತೋರಿಬಂತು.

"ಇಲ್ಲ, ಅಂತಹ ಸಂಶಯಗಳಿಗೆ ಯಾವ ಆಸ್ಪದವೂ ಇಲ್ಲ."

ತತ್ಕ್ಷಣವೇ ರಮೇಶನಿಗೆ ಲೋಕವೆಲ್ಲವೂ ಅಂಧಕಾರಮಯವಾಯಿತು. ಆಕಾಶಕ್ಕೆ ಎಸೆದ ಕಲ್ಲನ್ನು ಭೂಮಿಯು ಆಕರ್ಷಿಸುವಂತೆ, ತುದಿ ಅಡಿ ಇಲ್ಲದ ಪಾತಾಳವು ರಮೇಶನನ್ನು ಕೆಳಗೆ–ಕೆಳಗೆ–ಕೆಳಗೆ–ಎಳೆದು ಕೊಳ್ಳುವಂತೆ ಅವನಿಗೆ ತೋರಿಬಂತು. ಕುರ್ಚಿಯಲ್ಲಿ ಕುಳಿತಿದ್ದಾಗಲೇ ಅವನ ದೇಹವು ಹಿಂದೆ ಮುಂದೆ ಎರಡುಮೂರು ಸಲ ಆಂದೋಳಿಸಿ, ಡಬ್ಬನೆ ನೆಲದ ಮೇಲೆ ಬಿತ್ತು. ಶ್ಯಾಮಸುಂದರರಾಯರು ಕೂಡಲೇ ರಮೇಶನು ಬಿದ್ದ ಕಡೆಗೆ ಬಂದು, ಅವನನ್ನು ಪರೀಕ್ಷಿಸಿ ನೋಡಿದರು. ಶಾಂತವಾದಾ ಶರೀರದಲ್ಲಿ ಪ್ರಾಣದ ಚಿಹ್ನೆಯು ಯಾವುದೂ ಕಂಡು ಬರಲಿಲ್ಲ.

———

## ಕಿಚ್ಚಿನ ಕಾವಲು

ವೆಂಕಪ್ಪ ದೇಸಾಯರೂ ಮದ್ಧೂರಾಯರೂ ಚಿಕ್ಕಂದಿನಿಂದ ಕೂಡಿ ಆಡಿದವರು. ಬುದ್ಧಿ ಬಲು ಚುರುಕು. ಗರಡಿಯಾದರೂ ಒಂದೇ. ಆಯಾ ಕಾಲದಿಂದ ಕೋರ್ಟು ಕಚೇರಿಗಳಲ್ಲಿ ನಲಿದಾಡುತ್ತಿರುವ ಬ್ರಿಟಿಶ್ ನ್ಯಾಯದೇವತೆಯನ್ನು ಕುಣಿಸಾಡುವುದು ಅವರ ಕೈಯೊಳಗಿನ ಮಾತು. ಊರಲ್ಲಿಯ ಬೇರೆ ಬೇರೆ ತಂಡಗಳ ಹುಂಜಗಳನ್ನು ಹುರಿದುಂಬಿಸಿ ಕಾದು ಬಿಡುವುದೂ, ಸೋಲು ಗೆಲವಿನ ಆಟಕ್ಕೆ ತಾವು ಹೊಣೆಯಾಗದೇ ಪಾರಾಗುವುದೂ, ಬಿಚ್ಚಿದ ಕೈಗಳನ್ನು ಮೆಚ್ಚಿನಿಂದ ಮುಚ್ಚಿಸುವುದೂ ಆ ವೆಂಕಪ್ಪನಿಗೇ ಗೊತ್ತು. ಆ ಮಧ್ವಮುನಿಗೇ ಗೊತ್ತು. ಮಹಾರಾಯರ ಮಾಟಕ್ಕೆ ಮರುಳಾಗದವರೇ ಇಲ್ಲ. ಒಬ್ಬ ಪೋಲೀಸನುಳಿಯ ಲಿಲ್ಲ, ಒಬ್ಬ ವಕೀಲನುಳಿಯಲಿಲ್ಲ. ಕೈಗೆ ಬಂದದ್ದೇ ಸದ್ದು. ಹೂಂ!

ಒಮ್ಮೆ ದೇಸಾಯರ ದೊಡ್ಡ ರೈತ, ಅವರ ಪರಮ ಶಿಷ್ಯ ರಾಚಯ್ಯ ಒಂದು ಭಯಂಕರ ಕೊಲೆಯ ಪ್ರಕರಣದಲ್ಲಿ ಸಿಕ್ಕಿದ್ದ. ಆತನ ದೆಸೆಯಿಂದ ದೇಸಾಯರು ಸ್ವತಃ ಮುಂಬಯಿಗೆ ಹೋಗಿ ಬ್ಯಾರಿಸ್ಟರನ್ನು ಕರತಂದಿದ್ದರು. ಮದ್ಧೂರಾಯನಂತೂ ಇದ್ದೇ ಇದ್ದ. ಆ ಮೇಲೇನು ಕೇಳುವುದವರ ಕೈಚಳಕದ ಕಸರತ್ತು! ಬಿಡುಗಡೆಯಾಯಿತು. ಜಜ್‌ಸಾಹೇಬರು " There were surely giant brains, behind the scene, to work out minutely by each detail in this ghastly crime, which still elude the deft arm of law " "ಕಾಯದೆಯ ಕೈಯೆಳೆತವನ್ನಿನ್ನೂ ತಪ್ಪಿಸಿಕೊಳ್ಳುತ್ತಿರುವ, ಈ ಭಯಂಕರ ಪ್ರಕಾರದ ಪ್ರತಿಯೊಂದು ಇಕ್ಕಟ್ಟನ್ನೂ ಸೂಕ್ಷ್ಮವಾಗಿ ಯೋಚಿಸಿದ ವಿಶಾಲಬುದ್ಧಿಯುಳ್ಳವರಾರೋ ಈ ಪ್ರಕರಣದ ಬುಡದಲ್ಲಿದ್ದಿರ

ಬೇಕು''* ಎಂದು ತಮ್ಮ ನಿರ್ಣಯದಲ್ಲಿ ಬರೆದಿದ್ದರು. ನಮ್ಮ ಮೂಕ ವಿಶ್ವವಿದ್ಯಾಲಯಗಳಿಗೆ ಪ್ರಶಸ್ತಿ ಪತ್ರಿಕೆಗಳನ್ನು ಕೊಡುವುದೇ ಗೊತ್ತಿಲ್ಲ.

ಕಾಲದ್ದೆಂಥ ಚಮತ್ಕಾರ! ಕೂಡಿದ ಜುಗವು ಜಿಡಿಯಾಗಬೇಕೆ! ದೇಸಾಯರೂ ಮುದ್ದೂರಾಯರೂ ಅಂದಿಗೆ ಇಂದಿಗೆ ಕೂಡಿ ಕೆಲಸ ಮಾಡಿದವರು. ಒಂದು ಸಣ್ಣ ಮಾತಿಗಾಗಿ ಬಡಿದಾಡಿದರು. ವಿಷಯ ಸಣ್ಣದು. ಮಾತು ದೊಡ್ಡದಾಯಿತು. ಮುದ್ದೂರಾಯನ ಆಪ್ತನೊಬ್ಬನಿಗೆ ಸಾಲ ಬೇಕಾಗಿತ್ತು. ಆತನು ಸಾಲದ ಹೊಣೆಗಾಗಿ, ಬೇಕಾದ ಹೊಲ ಬರಕೊಡಲಿಕ್ಕೆ ಸಿದ್ಧನಾಗಿದ್ದ. ಹೊತ್ತೇ ಅಂತಹದು ಬಂದಿತ್ತು. ಆಪ್ತ ಸ್ವಕೀಯರಲ್ಲಿ ಸಾಲದ ಸೂಕ್ಷ್ಮ ಸಂಬಂಧವಿರಬಾರದೆಂಬದೊಂದು ಮುಧ್ದೂರಾಯನ ವ್ಯವಹಾರಸೂತ್ರ. ಸಾಲ ತಾನು ಕೊಟ್ಟರೂ ನೋರೆ ಬದಲು ಮಾಡುವದಕ್ಕಾಗಿ ಹೆಸರು ದೇಸಾಯರದು ಹೇಳಿದ; ಅವರ ಹೆಸರಲೇ ಹೊಲ ಬರಿಸಿದ. ಮುಂದೆ ಆ ಸಾಲ ಬಯ್ಯು ಪುಣ್ಯವಂತ ಸಾಲವನ್ನೂ ತೀರಿಸಲಿಲ್ಲ; ಹೊಲವನ್ನೂ ಕಬ್ಜಾ ಮಾಡಿಕೊಡಲಿಲ್ಲ. ದಿನ ದಿನಕ್ಕೆ ಬಡ್ಡಿ ಮಾತ್ರ ಬೆಳೆಯುತ್ತ ಬಂದಿತು. ಸಾಮುದಾಮುಗಳ ಎಲ್ಲ ಪ್ರಕಾರಗಳಾಗಿ ಹೋದುವು. ಮಧ್ಯಸ್ಥರ ಪುಣ್ಯ ಬೆಳೆಯಿತು. ಪುಣ್ಯಾತ್ಮ ಹಣಿಯಲಿಲ್ಲ. ಮೂರೂ ಕೋರ್ಟಿನ ಮೆಟ್ಟಿಲುಗಳು ಸವಿದುವು. ಹೊಲದ ಕಬ್ಜಾ ಅಂತೂ ಬಂದಿತು. ರೊಕ್ಕದ ಸುರಿಮಳೆ ಮಾತ್ರ ಆಯಿತು. ದೇಸಾಯರೇ ಎಲ್ಲ ವೆಚ್ಚ ಮಾಡಿದರು.

ದೇಸಾಯರೂ ಮುದ್ದೂರಾಯನೂ ತಮ್ಮ ತಮ್ಮೊಳಗೆ ಒಂದು ಕರಾರು ಮಾಡಿಕೊಂಡಿದ್ದರು. ವೆಚ್ಚ ಮಾಡಿದ ಹಣ ಮೊದಲು ಮುದ್ದೂರಾಯ ದೇಸಾಯರಿಗೆ ಕೊಡಬೇಕು ಮತ್ತು ದೇಸಾಯರು ತಾವು ಹಾಕಿದ ಹಣಕ್ಕಂತೂ ಆಯಿತು, ಮಾಡಿದ ಶ್ರಮಕ್ಕಂತೂ ಆಯಿತು ಹೊಲದಲ್ಲಿ ಐದಾಣೆಯಷ್ಟು ಪಾಲು ತಮಗಿಟ್ಟುಕೊಂಡು ಉಳಿದ ಹನ್ನೊಂದಾಣೆಯಷ್ಟು ಪಾಲು ಮುದ್ದೂರಾಯನಿಗೆ ಬಿಟ್ಟು ಕೊಡಬೇಕು.

ಒಮ್ಮೆ ಮುದ್ದೂರಾಯ ಏನೋ ಒಂದು ಲಹರಿಗೆ ಬಿದ್ದು ಹೊಲದ ಬಗ್ಗೆ ಕೇಳಿದ. ದೇಸಾಯರು ತಮ್ಮ ಹಣ ಕೇಳಿದರು. ಮೂರು ಸಾವಿರ

ರುಪಾಯಿಗಳ ವಿಷಯ, ಇಂಥ ಎಷ್ಟು ಮೂರು ಸಾವಿರ ರುಪಾಯಿ ಗಳನ್ನು ಅವರಿಬ್ಬರೂ ಹಾಳು ಮಾಡಿದ್ದರೊ! ದೇಸಾಯರು ಹಣ ಕೇಳ ಬಾರದಾಗಿತ್ತು. ಮುದ್ದೂರಾಯನಾದರೂ ವ್ಯವಹಾರದಲ್ಲಿ ಚೊಕ್ಕಾ ಗಿರಬೇಕಾಗಿತ್ತು. ಎರಡೂ ಉಕ್ಕಿನ ಒರೆಗಳು. ಸರಿದು ಮಾತಾಡು ವವರಾರು!

ವೈಮನಸ್ಯವಂತೂ ಹುಟ್ಟಿಯೇ ಬಿಟ್ಟಿತು. ಒಮ್ಮೆ ದೇಸಾಯರು ಒಂದು ದತ್ತಕ ಪ್ರಕರಣದಲ್ಲಿ ಸಾಕ್ಷಿಗೆ ಹೋದಾಗ ಅವರು ಸುಳ್ಳು ಹೇಳಿದ ಅಪರಾಧಕ್ಕಾಗಿ ಎಂದು, ಐದುನೂರು ರುಪಾಯಿ ದಂಡ ವಾಯಿತು. ಮುದ್ದೂರಾಯನ ಲೀಲಾಕೌತುಕ! ಮುಂದೆ ತುಸು ದಿನ ಗಳಲ್ಲಿ, ಮುದ್ದೂರಾಯನಿಗೆ ಆರು ತಿಂಗಳ ವಿಸಾಪೂರ ಸಹವಾಸವಾಯ್ತು.

ಊರೊಳಗಿನ ಸಣ್ಣ ಪುಟ್ಟ ತಂಡಗಳೆಲ್ಲ ಮುರಿದು ಎರಡೇ ಎರಡು ತಂಡಗಳು ಕಾಣಹತ್ತಿದುವು. ಹೊಲದ ಮಾತಿನ್ನೂ ಮುಗಿದಿರಲಿಲ್ಲ. ಮುದ್ದೂರಾಯ ಕೋರ್ಟಿನ ಕಟ್ಟೆ ಹತ್ತುವನೆಂದು ಸುದ್ದಿ ಬಂದಿತು. ಶ್ರೀವಿಠ್ಠಲೇಶ ಆದಿಬುನಾದಿಯಿಂದ ದೇಸಾಯರ ಕುಲದೇವರು. ದೇಸಾಯರಿಗೆ ಬಲು ದಿನದಿಂದ ಆತನಿಗೊಂದು ಹರಕೆ ಮುಟ್ಟಿಸಬೇಕಾ ಗಿತ್ತು. ಯೋಗ್ಯ; ಕುಲದೇವರ ಹರಕೆ ಮೊದಲು ಮುಟ್ಟಿಸತಕ್ಕದ್ದು. ದೇಸಾಯರು ವ್ಯಾಜ್ಯದ ಹೊಲವನ್ನು ಆ ವೈಕುಂಠ ಪತಿಗೆ ಸಮರ್ಪಿಸಿ ತಾವು ಸರಿದುಕೊಂಡರು. ಶ್ರೀಹರಿಗೇ ತನ್ನ ಚಿಂತೆ.

ಕೋರ್ಟಿನಲ್ಲಿ ಪ್ರಕರಣ ನಡೆದು ತ್ರಿಸ್ಥಲದ ಯಾತ್ರೆ ಸಂಪೂರ್ಣ ವಾಯಿತು. ಹಾಯ್‌ಕೋರ್ಟಿನವರು ಎರಡೂ ದಂಡೆಗಳ ಮೇಲೆ ಕೈಯಿಟ್ಟು, ಮುದ್ದೂರಾಯ ದೇಸಾಯರಿಗೆ, ಅಂದರೆ ಈಗ ಶ್ರೀವಿಠ್ಠಲೇಶ ನಿಗೆ, ಕೊಡತಕ್ಕ ಹಣಕ್ಕೆ ಒಪ್ಪಿದ್ದರು. ಆದರೆ ಈ ವರೆಗೆ ಹೊಲದಿಂದ ಬಂದ ಲಾಭವನ್ನು ಮೂಲ ರಕಮಿನಲ್ಲಿ ಮುರಿಯಬೇಕು. ಕಬ್ಜಾ ಶ್ರೀ ವಿಠ್ಠಲೇಶನದು. ಮುದ್ದೂರಾಯ ವರ್ಷ ವರ್ಷಕ್ಕೆ ಬಂದ ವಸೂಲಿನಲ್ಲಿ ಪಾಲುಗಾರ. ಅಂತೂ ಇಬ್ಬರೂ ಗೆದ್ದಂತಾಗಲಿಲ್ಲ; ಸೋತಂತೂ ಆಗಲಿಲ್ಲ.

ಹಾಯಕೋರ್ಟಿನ ನಿರ್ಣಯ ಬಂದ ದಿನವೇ ಮಧ್ಯರಾತ್ರಿಯ ಸಮಯಕ್ಕೆ ಮುದ್ದೂರಾಯನ ಮನೆಗೆ ಬೆಂಕಿ ಹತ್ತಿ, ಅದು ನೆಲಸಮಾನ

ವಾಯಿತು. ಶ್ರೀ ವಿಠ್ಠಲೇಶನೇ ಕೋಪಿಸಿರಬೇಕು. ಮದ್ದೂರಾಯ ಊರಲ್ಲಿರಲಿಲ್ಲವಂತೆ. ಅವರ ಹೆಂಡತಿಯೂ ತವರುಮನೆಗೆ ಹೋಗಿದ್ದಳು. ಮನೆಗೆ ಕೀಲಿಯೇ ಇತ್ತು.

ದಿನ ಎರಡು ದಿನ ಅನ್ನುತ್ತ ಆರೆಂಟು ತಿಂಗಳುಗಳ ಅವಧಿ ಯಾಯಿತು. ಮದ್ದೂರಾಯ ಮರಳಿ ಊರಿಗೆ ಬರಲಿಲ್ಲ. ಅವನೆಲ್ಲಿದ್ದ ನೆಂಬುದೂ ಯಾರಿಗೂ ಗೊತ್ತಾಗಿರಲಿಲ್ಲ. ಜನ ನಾಲ್ಕು ದಿನ ಮಾತಾಡು ತ್ತಿತ್ತು. ಮುಂದೆ ಮರೆತು ಬಿಟ್ಟಿತು.

* * * *

ದೇಸಾಯರ ಮನೆಯ ಕಟ್ಟೆಯ ಮೇಲೆ ಒಂದು ಬೆಳಗಿನಲ್ಲಿ ಯಾರೋ ಒಂದು ತಿಂಗಳ ವಯಸ್ಸಿನ ಕೂಸನ್ನು ಬಿಟ್ಟು ಹೋಗಿದ್ದರು. ಯಾವ ಮಕ್ಕಳೊಂದಿಗಿತ್ತಿಯದಿತ್ತೋ! ಪಾಪ! ಮುಂಜಾವಿನ ತಂಗಾ ಳಿಗೆ ಅರೆಹೆಪ್ಪುಗಟ್ಟಿ ಅದರ ಮೈ, ಮೇಲ್ಹೊರೆಯಂತೆ ನಡುಗುತ್ತಿತ್ತು. ಗಂಡಸರೂ ಹೆಂಗಸರೂ ಚಿಕ್ಕವರೂ ಮುದುಕರೂ ಓಣಿಯೊಳಗಿನ ಹೋಗುಬರುವವರೂ ಹಾಗೇ ನೆರೆದುಕೊಂಡಿದ್ದರು. ಕೂಸು ಮಾತ್ರ ಶಾಂತವಾಗಿ ನಿದ್ರೆ ಮಾಡುತ್ತಿತ್ತು.

ಕೂಸು ಯಾರದು? ಕೇವಲ ತರ್ಕದಿಂದೀ ಮಾತು ಗೊತ್ತಾಗು ವಂತಿರಲಿಲ್ಲ. ಅಲ್ಲಿ ಕೂಡಿದ್ದ ಹದಿನೈದು ಹದಿನಾರು ವಯಸ್ಸಿನ ಬಾಲ ವಿಧವೆಯರನ್ನು ಮೊದಲ್ಗೊಂಡು, ಎಪ್ಪತ್ತು ಎಂಬತ್ತು ವಯಸ್ಸಿನ ಮುಪ್ಪಿನ ವಿಧವೆಯರ ವರೆಗೆ ಎಲ್ಲರೂ ತಮ್ಮೊಳಗೇ ಒಬ್ಬರನ್ನೊಬ್ಬರು ಸಂಶಯ ದೃಷ್ಟಿಯಿಂದ ನೋಡಹತ್ತಿದ್ದರು. ಪೋಲೀಸರು ಬಂದು ಪಂಚನಾಮೆಯನ್ನೇನೋ ಮಾಡಿದರು.

ಕೂಸು ಹೆಣ್ಣು. ಹುಟ್ಟಿ ತಿಂಗಳಾಗಿರಬಹುದಷ್ಟೇ. ಹೊಯ್ಯಾಲು ಣಿಸಿ ಜೀವಕ್ಕಿಂತ ಹೆಚ್ಚು ಮಾಡಿ ಸಾಕುವವರಾರು! ಊರೊಳಗಿನ ಕಲಾವತಿಯರಲ್ಲೊಬ್ಬಿಬ್ಬರ ಮನಸ್ಸು ಕರಗಿತು. ಪೋಲೀಸರು ಕೂಸನ್ನ ವರಿಗೊಪ್ಪಿಸಿದಂತೇ ಆಗಿತ್ತು. ದೇಸಾಯರದಕ್ಕೊಪ್ಪಲಿಲ್ಲ. ಅವರಿಗೂ ಮಕ್ಕಳಿರಲಿಲ್ಲ. ಮನೆಗೊಬ್ಬ ಮಗಳಾದಳು.

* * * *

ಇತ್ತೀಚೆಗೆ ಬಾಳಮ್ಮನ (ದೇಸಾಯರ ಸಾಕ ಮಗಳು) ಹೊರತಾಗಿ ದೇಸಾಯರ ಹೆಜ್ಜೆಯೇ ಸಾಗುತ್ತಿರಲಿಲ್ಲ. ಹಗಲಿರಳು ಬಾಳಮ್ಮ ಬಾಳಮ್ಮ. ಬೇರೆ ಮಾತೇ ಇರಲಿಲ್ಲ. ಉಂಡುಟ್ಟ ಜೀವಕ್ಕೆ ಅಮೃತವೊಂದು ಸಿಕ್ಕಂತಾಗಿತ್ತು. ಬಾಯಿಯವರು (ದೇಸಾಯರ ಹೆಂಡತಿ) ತೀರಿಕೊಂಡ ಮೇಲಂತೂ ಕೇಳುವ ಕಾರಣವೇ ಇರಲಿಲ್ಲ. ಅವರಾದರೂ ಬಾಳಮ್ಮನನ್ನು ತಮ್ಮ ಅಂಗೈ ಅಲೆಯಂತೆ ಜೋಪಾನ ಮಾಡಿದ್ದರು. ದೇಸಾಯರ ಮೇಲೆ ಅವಳನ್ನು ಸಾಕಿ ಸಲಹುವ ಭಾರವಂತೂ ಬಿದ್ದೇ ಇತ್ತು. ಈಗ ಅವಳ ಮದುವೆಯ ಚಿಂತೆ. ಬಾಳಮ್ಮನ ಜನ್ಮದಿತಿಹಾಸ ಎಲ್ಲರಿಗೂ ಗೊತ್ತಾದದ್ದು. ಸಂಪನ್ನ ಮನೆತನಗಳೇನೂ ಕಡಿಮೆಯಿರಲಿಲ್ಲ. ದೇಸಾಯರ ಸಂಪತ್ತಿಯ ಮೇಲಾಶೆಯಿದ್ದರೂ ಸಂಬಂಧ ಮಾಡಿಕೊಳ್ಳುವುದು ಸ್ವಲ್ಪ ಕಠಿಣವಾಗಿದ್ದಿತು. ಬಾಳಮ್ಮನ ಬೆಳೆಗೆಯಂತೆ ದೇಸಾಯರ ಚಿಂತೆ ದೊಡ್ಡದಾಗಹತ್ತಿತು. ಬರಿ ವಿಚಾರದಿಂದೀ ಮಾತು ಮುಗಿಯುವಂತಿರಲಿಲ್ಲ. ಹತ್ತೆಂಟು ಕಡೆಗೆ ಯತ್ನ ಮಾಡಿ ನೋಡಿದರು. ಎಲ್ಲರೂ ಮೂಗು ಮುರಿಯುವರೇ. ಒಬ್ಬಿಬ್ಬರಂತೂ ಬಾಳಮ್ಮನ ಜಾತಿ ಯಾವುದೆಂದು ಪ್ರಶ್ನೆ ಮಾಡಿದರು. ದೇಸಾಯರು ರೇಗಿದರು. ಬಾಳಮ್ಮ ಸಿಗೆ ತನ್ನ ಜನ್ಮದಿತಿಹಾಸ ಗೊತ್ತಿರಲಿಲ್ಲವಾದರೂ ತನ್ನ ಮದುವೆಯ ವಿಷಯದಲ್ಲಿ ಏನೋ ತೊಂದರೆ ಬರುತ್ತಿರುವುದೆಂಬದು ಇತ್ತಿತ್ತ ಅವಳ ಲಕ್ಷ್ಯಕ್ಕೆ ಬರಹತ್ತಿತ್ತು. ದೇಸಾಯರ ಮೋರೆಯ ಮೇಲೆ ದಿನದಿನಕ್ಕೆ ಹೆಚ್ಚುತ್ತಿರುವ ನಿರಾಶೆಯನ್ನು ನೋಡಿ, ಅವಳ ಎದೆ ಒಡೆದು ನೀರಾಗುತ್ತಿತ್ತು. ಒಂದು ದಿನ ಅವರು ರೊಚ್ಚಿಗೆದ್ದು "ಯಾವ ಹಾದೀ ಹೋಗೋ ಕಳ್ಳ ಬರವಲ್ಲನ್ಯಾಕs. ಕೊಟ್ಟುಬಿಡ್ತೇನಿ" ಎಂದು ಸ್ವಲ್ಪ ಗಟ್ಟಿಯಾಗಿಯೇ ನುಡಿದುಕೊಂಡರು. ಬಾಳಮ್ಮ ಹತ್ತಿರ ನಿಂತಿದ್ದು ಅವರ ಲಕ್ಷ್ಯಕ್ಕೆ ಬರಲಿಲ್ಲ. ಅವಳು "ಇದಕ್ಕೂ ಭಾಂವ್ಯಾಗ ಯಾಕ ನುಗಸೋದಿಲ್ಲ" ಎಂದು ಕೇಳಿ ಕರುಣ ದೃಷ್ಟಿಯಿಂದ ನೋಡಿದಳು. ದೇಸಾಯರ ಕಣ್ಣಿಗ ಕತ್ತಲೆಯೇ ಕಾಣಹತ್ತಿತು.

* * * *

ದೇಸಾಯರ ಮನೆಯೆಂದರೆ ದೊಡ್ಡ ಧರ್ಮಶಾಲೆ,—ಅನ್ನಛತ್ರ

ಊರಿಗೆ ಬಂದ ಪರಸ್ಥರು, ದೇಶಾವರಿಯವರು, ಹರಿದಾಸರು, ಕೆಲಸದ ನಿಮಿತ್ತ ಬಂದವರು ಎಲ್ಲರೂ ಇಲ್ಲಿಯೇ ಇಳಿದುಕೊಳ್ಳುವ ಪರಿಪಾಠ. ಸಮಾರಾಧನೆ ಹಾಗೇ ನಡೆದಿರುತ್ತಿತ್ತು. ದೇಸಾಯರಿಗೆ ಮನೆಯಲ್ಲಿಯ ಯಾವ ಸುದ್ದಿಯೂ ಗೊತ್ತಿರುತ್ತಿರಲಿಲ್ಲ. ಬಾಯಿಯವರಿದ್ದಾಗ ಎಲ್ಲ ವ್ಯವಸ್ಥೆಯನ್ನು ಅವರೇ ನೋಡಿಕೊಂಡು ಹೋಗುತ್ತಿದ್ದರು. ಅವರ ನಂತರ ಬಾಳವ್ವನಾದರೂ ಮೊದಲಿನಂತೆ ಎಲ್ಲವನ್ನು ನಡೆಯಿಸಿದ್ದಳು. ಅವಳ ಮದುವೆಯ ಮಾತಿನ್ನೂ ನೆನಗುದಿಗೇ ಬಿದ್ದಿತ್ತು.

ಒಂದು ದಿನ ಒಬ್ಬ ಮುದುಕ ಬಾವಾ ಬಂದು ಅವಳ ಕೈ ನೋಡಿ ಏನೇನೋ ಹೇಳಿದ. ಆಯಿತು. ಅಂದಿನಿಂದವಳು ಮನೆಯಲ್ಲಿ ವಿರಕ್ತ ಭಾವದಿಂದಲೇ ವರ್ತಿಸಹತ್ತಿದಳು. ತನ್ನ ಕೋಣೆಯಲ್ಲಿಯೇ ಕಾಲ ಕಳೆಯುತ್ತಿದ್ದಳು. ಬಾವಾ ಬಂದರೆ ಆತನನ್ನು, ಮನೆಯಿಂದ ತುಸು ದೂರದಲ್ಲಿದ್ದ ಮಾವಿನ ತೋಪಿಗೆ ಕರದೊಯ್ದು, ಅಲ್ಲಿ ಆತನ ಸಂಗಡ ತಾಸು ತಾಸು ಮಾತಾಡುತ್ತ ಕುಳಿತುಕೊಳ್ಳುತ್ತಿದ್ದಳು. ಹೀಗೇ ನಡೆ ಯಿತು ಕೆಲದಿನ. ಒಂದು ದಿನ ಸಂಜೆಗೆ ಮನೆ ಬಿಟ್ಟು ಹೋದವಳು ಮನೆಗೇ ಬರಲಿಲ್ಲ. ಎಲ್ಲರೂ ಗಾಬರಿಯಾದರು. ಕೆರೆ ಬಾವಿಗಳನ್ನು ಹುಡುಕಿದರು. ಶಾವು ಸಿಗಲಿಲ್ಲ. ದೇಸಾಯರು ಹಣೆ ಹಣೆ ಬಡಕೊಂಡರು.

* * * *

ರಾತ್ರಿಯ ಹತ್ತು ಹನ್ನೊಂದು ಗಂಟೆಯ ಸಮಯ. ದಾರಿಯಲ್ಲಿ ಯಾರೂ ಸುಳಿದಾಡುತ್ತಿರಲಿಲ್ಲ. ಮುಂದೆ ಒಬ್ಬ ಬಾವಾ ನಡೆದಿದ್ದ. ಹಿಂದಿನಿಂದೊಬ್ಬ ಹೆಣ್ಣುಮಗಳು.

"ನನ್ನೆಲ್ಲಿ ಕರಕೊಂಡು ಹೊಂಟೀದೀ!"

"ಮುನ್ನೋಡಿ ನಡಿ—" ಬಾವಾ ಗುರಗುಟ್ಟಿದ.

ಹೆಣ್ಣುಮಗಳು ಅಳುತ್ತ ನಿಂತುಕೊಂಡಳು.

"ಹೂಂ—ಯಾಕs—"

ಅವಳು ಮತ್ತಿಷ್ಟು ಅಳಹತ್ತಿದಳು. "ನಮ್ಮಪ್ಪನ ಕಡೆಗೆ ಹೋಗ್ತೇನಿs—"

"ಆದ್ಯಾವ ನಿಮ್ಮಪ್ಪ-ನಾನು ನಿಮ್ಮಪ್ಪ-ಹೂಂ-ಮುಚ್ಚು ಬಾಯಿ."

"ನಮ್ಮಪ್ಪನ ಕಡೆಗೆ ನನ್ನ ಕಳಸೂ—"

"ಅವ ನಿಮ್ಮಪ್ಪನು-ಮನೆ ಹಾಳು ಮಾಡುವವ-ಹೂಂ-ಮುಚ್ಚಂತೇನಿ ಬಾಯಿ."

"ಸುಳ್ಳು-ಅವ್ವನ ಕಡೆಗೆ ಕರಕೊಂಡು ಹೋಗ್ತೇನಂತ್ಹೇಳಿ-"

"ಅವಳು ಅಳುವುದನ್ನು ಕೇಳುವವರಾರು! ಬಾವಾ ಸಿಟ್ಟಿನಿಂದ ಅವಳ ಕೈ ಹಿಡಿದು ತಿರುವಿದ. ಚೀರಿದಳು; ಉರುಳಿ ಬಿದ್ದಳು. ಅವಳು ಮೇಲಕ್ಕೇಳುವಷ್ಟರಲ್ಲಿ ಬಾವಾ ಅವಳ ಮೇಲೆ ದುಮುಕಿ, ಕುತ್ತಿಗೆಗೆ ಕೈ ಹಾಕಿದ. ಬಲು ಒದ್ದಾಡಿದಳು. ಕೊನೆಗೊಮ್ಮೆ ದೇಹದಿಂದ ಜೀವದ ಬಿಡುಗಡೆಯಾಯಿತು. ಬಾವಾ ಅಲ್ಲಿಯೇ ಹುತ್ತಿಗೆ ಆತು ದಣಿವಾರಿಸಿಕೊಳ್ಳುತ್ತ ಕುಳಿತುಕೊಂಡ. ದೂರದಲ್ಲಿ ಗಸ್ತಿಯವರ ಕೂಗು ಕೇಳಬಂತು. ನಡುನಡುವೆ ನಾಯಿಗಳು ಬೊಗಳಿದ್ದೂ ಕೇಳಿಸಿತು. ಬಾವಾ ವಿಚಾರದಿಂದೆಚ್ಚತ್ತು ಅಲ್ಲಿಯೇ ಒಂದು ಹಾಳು ಬಾವಿಗೆ ಎಳೆದೊಯ್ದು, ಜೋಳಿಗೆಯಿಂದೊಂದು ಕಂದಿಲಿಯನ್ನು ತೆಗೆದು, ಆ ಪ್ರೇತವನ್ನು ಛಿನ್ನ ಭಿನ್ನ ಮಾಡತೊಡಗಿದ. ಎಷ್ಟೋ ಹೊತ್ತಿನವರೆಗೆ ತನ್ನ ಕೆಲಸದಲ್ಲಿ ಮಗ್ನನಾಗಿದ್ದ. ಕಾಗೆಗಳೆಚ್ಚತ್ತವು. ಆತನು ಚಟ್ಟನೆ ಎದ್ದ. ಬೆದರಿ ಅತ್ತಿತ್ತ ನೋಡಿ ಕಗ್ಗತ್ತಲೆಯಲ್ಲಿ ಮಾಯವಾದ.

* * * *

ಬಾಳಮ್ಮ ಇಲ್ಲದಂತಾದಂದಿನಿಂದ ದೇಸಾಯರು ಎದೆ ಒಡಕೊಂಡು ಹಾಸಿಗೆಯನ್ನೇ ಹಿಡಿದರು. ಬೇನೆ ಕೈಮೀರಿತು. ಹೇಳುವುದನ್ನೆಲ್ಲ ಹಾಗೇ ತುಂಬಿಕೊಂಡು ದೇಸಾಯರು ಒಂದು ದಿನ ನಡೆದರು. ಸ್ಮಶಾನ ಯಾತ್ರೆ ಸೂರಿಸೂರಿಯಾಯಿತು. ದೇಸಾಯರು ಯಾರಿಗೆ ಬೇಕಾಗಿರಲಿಲ್ಲ! ಎಲ್ಲರೂ ಈವೊತ್ತು ಭೇದಗಳನ್ನು ಬಿಟ್ಟು ಅವರನ್ನು ಹಿಂಬಾಲಿಸಿದರು. ಮನೆ ಬಿಡುವುದಕ್ಕೇ ಮೂರುಸಂಜೆಯಾಗಿತ್ತು. ಸುತ್ತುಮುತ್ತಲಿನ ಹಳ್ಳಿಯವರೂ ಸ್ಮಶಾನಕ್ಕೇ ಬಂದುಬಿಟ್ಟಿದ್ದರು. ಅಗ್ನಿಸಾಧನೆಯಾಗಿ ಚಿತೆಗೆ ಬೆಂಕಿ ಹತ್ತಬೇಕಾದರೆ ರಾತ್ರಿ, ಏರಿಯೇ ಬಂದಿತು. ಆಪ್ತರೂ ಇಷ್ಟರೂ ಒಂದೊಂದು ಉರುವಲನ್ನು ಚಿತೆಗೇರಿಸಹತ್ತಿದರು. ರಾಚಯ್ಯ ಬಂದಿದ್ದ. ಆತನೂ ಎರಡು ಉರುವಲುಗಳನ್ನು ಕೈಯಲ್ಲಿ

ಹಿಡಿದುಕೊಂಡಿದ್ದ. ಆತನ ಕಣ್ಣುಗಳಿಂದ ನೀರು ಸುರಿಯುತ್ತಿದ್ದುವು. "ನಾನೂ ಈ ಕಟಿಗಿ ಇಡಲೇನ್ರಿ!" ಎಂದು ನಡುಗುವ ದನಿಯಿಂದ ಕೇಳಿದ.

"ಹಾಂs–ಈಗs ಮುಟ್ಟಬ್ಯಾಡಪ್ಪಾ–" ಎಂದು ರಾಮಭಟ್ಟರು ವಸಗುಟ್ಟಿದರು.

"ಸುಮ್ಮನಿರ್ರಿ. ಭಟ್ರ! ನಾವೂ ನೀವೂನs ದೂರ ದೇಸಾಯರಿಗೆ. ಅಂದಿಗೆ ಇಂದಿಗೆ ರಾಚಯ್ಯ–ಅಂದರs–ಜೀವ ಕಳಕೋತಿದ್ರು ದೇಸಾಯರು. ಹೂಂs–ಅವರನೇನ್ ಕೇಳ್ತೀ. ಕಿಚ್ಚಿಗ್ಯಾತರ ಮೈಲಿಗಿ?–ಇಲ್ಲಿ ಬಂದವ್ರ್ಯಾಲ ಎಲ್ಲಾರು ದೇವರs–"

"ದೇವರನಾದರೂ ಹ್ಯಾಂಗ ಮುಟ್ಟಾಕ ಬರತsತ್ರೀ?" ಯಾರೋ ಅಂದುಬಿಟ್ಟರು. ರಾಚಯ್ಯ ಭಕ್ತಿ ಅಭಿಮಾನ ಭೀತಿ ಮುಂತಾದ ಅನೇಕ ಭಾವನೆಗಳ ಸೆಳವಿನಲ್ಲಿಯೆ ಚಿತೆಯ ಹತ್ತಿರ ಹೋಗಿ "ಮಾರಾಯ್ರಾ... ಸೀಸs ನನಗ ಮಂಣ್ ಕೊಟ್ಟೀ ಅಂತ ಮಾಡಿದ್ನಿ" ಎಂದು ಆರ್ತ ಸ್ವರದಿಂದ ಕೂಗಿ, ಉರುವಲುಗಳನ್ನೇರಿಸಿದ. ಅಗ್ನಿನಾರಾಯಣನು ಮೆಲ್ಲ ಮೆಲ್ಲನೆ ತನ್ನ ಉಗ್ರಸ್ವರೂಪವನ್ನು ತೋರಹತ್ತಿದನು. ಎಲ್ಲರೂ ಹಿಂದೆ ಸರಿದು ಗುಂಪುಗುಂಪಾಗಿ ಕುಳಿತುಕೊಂಡರು. ಎಲೆ ಅಡಿಕೆ ಸಿಗರೇಟುಗಳ ವ್ಯವಸ್ಥೆಯಾಯಿತು. ಆ ಮಾತು ಈ ಮಾತು ನಡೆದುವು.

"ನಾರಾಯಣಾ, ಬಾಳಾ, ಇಲ್ಲೆ–ಚಹಾದ್ದೇನಾರs ವ್ಯವಸ್ತಾ ಆಗ್ತದೇನು ನೋಡತೀಯಾ" ಒಂದು ಗುಂಪಿನೊಳಗಿನ ಬಕ್ಕತಲೆಯ ಮುದುಕ ಕೇಳಿದ.

"ಇಲ್ಲೇನು ವ್ಯವಸ್ಥಾ ಆಗಬೇಕ್ರಿ! ನಮ್ಮ ಮನೀಸs ಇದು?" ಎಂದು ಗುರಗುಟ್ಟಿ ನಾರಾಯಣ ಮುಂದೆ ಸಾಗಿದ." "ಯಾರಿದ್ದೀರಪ್ಪಾ ದಕ್ಷಿಣೀಯುವರು!" ಎಂದು ಕೂಗಿದ.

ಯಾಚಕರ ದಂಡೇ ಇತ್ತು. ನಾರಾಯಣ ಕೈಗೆ ಬಂದ ನಾಣ್ಯವನ್ನು ಕೊಡುತ್ತ ನಡೆದಿದ್ದ. ಯಾಚಕರು ತುಂಬಾ ಸಂತೋಷದಲ್ಲಿ ಮುಳುಗಿದರು. ಈವೊತ್ತು ಸತ್ತ ಮಹಾಪುರುಷ ದಿನವೊಂದಕ್ಕೆ ಸಾಯಲೆಂದು ಪರಮೇಶ್ವರನನ್ನು ಪ್ರಾರ್ಥಿಸಿದರು. ಈ ದಂಡಿನಲ್ಲಿ ಒಬ್ಬ

ಫಕೀರ ಚಿತೆಯ ಕಡೆಗೆ ನೋಡುತ್ತ ನಿಂತಿದ್ದ. ನಾರಾಯಣ ಆತನಿಗೂ ಒಂದು ನಾಣ್ಯ ಕೊಡಬೇಕೆಂದು ಕೈಚಾಚಿ " ಓಯ್ ಫಕೀರಸಾಬ್ " ಎಂದವ ನನ್ನು ಎಚ್ಚರಿಸಿದ.

" ಯಹ್ ಕೌನ್ ಧರ್ಮಾತ್ಮಾ ಥಾ! " ಫಕೀರನು ಕೈಯೊಡ್ಡುತ್ತ ಕೇಳಿದ. ಒಡ್ಡಿಯೊಳಗೆ ನಾಣ್ಯ ಬಿದ್ದಿತು. ಪ್ರಶ್ನೆಗೆ ಉತ್ತರ ಸಿಗಲಿಲ್ಲ. ನಾರಾಯಣ ಯಾವುದೋ ಒಂದು ಗುಂಪಿನಲ್ಲಿ ಆಗಲೇ ಸೇರಿ ಬಿಟ್ಟಿದ್ದ. ಮಾದರ ಕರಿಯಾ ಏನೇನೋ ಹೇಳತೊಡಗಿದ. ಫಕೀರನಿಗೆ ಆತನು ಹೇಳಿದ್ದು ತಿಳಿಯಿತೋ ಬಿಟ್ಟಿತೊ!

ಕಿಚ್ಚಿನ ಬೆಂಕಿಯು ಉಕ್ಕೇರಿ ಹೊರಚಲ್ಲಹತ್ತಿತು. ಫಟ್ ಫಟ್ ಎಂದು ಸಪ್ಪಳವೂ ಕೇಳ ಬಂದಿತು. ಕೂಡಲೆ "ಅಪ್ಪಣೆಯಂತೂ ಆತು. ಆಚಾರ್ರ ನಡೀರಿನ್ನ ಮನೀಗೆ. " ಯಾರೋ ಕೂಗಿದರು.

" ನೀವು ನಡೀರಿ. " ಆಚಾರ್ಯರು ಒಂದು ಕಳಗವನ್ನು ತೆಗೆದು ಕೊಂಡು ಕಿಚ್ಚಿನಲ್ಲಿ ಚುಚ್ಚುತ್ತ ಸುತ್ತಲೂ ತಿರುಗಾಡಹತ್ತಿದರು.

" ಮಹಾರಾಯನ ಕಡೇಯ ಸೇವಾ-ಇಷ್ಟರನಬಹಳs-" ಎಂದು ಆಚಾರ್ಯರೂ ಹೊರಟರು. ಕರಿಯಾ ಕೇಳಿದ, " ಕರ್ಮಾ ಯಾರ ಹಿಡಿಯಾವರ್ರಿ ?—"

" ನಮ್ಮ ರಂಗಪ್ಪನ ಮಗ ಇಲ್ಲs ಆ ಚಿಕ್ಕಪ್ಪಾ-ದೇಸಾಯರಿಗೂ ಮಗನs " ಎಂದು ಯಾರೋ ಹೇಳಿದರು. "

ಎಲ್ಲರೂ ಹೋದಂತಾಯಿತು. ಫಕೀರ ನಿಂತೇ ಇದ್ದ. ಎಲ್ಲ ಸದ್ದು ಇಲ್ಲದಂತಾದದ್ದನ್ನು ನೋಡಿ ಚಿತೆಯ ಹತ್ತಿರ ಹೋಗಿ ನಿಂತ. ಮೃಣ್ಮಯ ದೇಹವು ಈಗ ಬೆಂಕಿಯಲ್ಲಿ ಬೆಸೆತು ಕುಸಿಬೀಳಹತ್ತಿತ್ತು. ಉರಿಯ ಚಿಗುರುಗಳು ಅಲ್ಲಲ್ಲಿ ಕುಣಿಯುತ್ತಿದ್ದವು. ಎಷ್ಟೋ ಹೊತ್ತಿನ ಮೇಲೆ ಕಿಚ್ಚು ಶಾಂತವಾಗಬಂದಿತು. ಗಾಳಿಯ ಸುಳಿವಿಗೆ ಬೂದಿ ಹಾರ ಹತ್ತಿತು. ಫಕೀರನು ಅಲ್ಲಿಯೇ ಬಿದ್ದ ಕಳಗವನ್ನು ತೆಗೆದುಕೊಂಡು ಕಿಚ್ಚಿನ ಬೆಂಕಿಯನ್ನು ಸರಿಮಾಡಿ ಅದನ್ನು ಕಿಚ್ಚಿನಲ್ಲಿಯೆ ಒಗೆದುಬಿಟ್ಟ. ಬೆಂಕಿಯು ಉರಿಗಟ್ಟಿತು. ಫಕೀರ ಅದರ ಕಡೆಗೆ ನೋಡುತ್ತ ನಿಂತಿದ್ದ.

---

## ಹತಭಾಗ್ಯನ ಭಾಗ್ಯ

ನಾನು ನನ್ನೊರ್ವ ಗೆಳೆಯನೊಡನೆ ಗುಜರಾಥದಲ್ಲಿರುವ ಅವನ ಹುಟ್ಟಿದೂರಿಗೆ ಹೋಗಿದ್ದೆನು. ಗುಜರಾಥದ ಇತಿಹಾಸವನ್ನು ಅವನಿಂದ ಕೇಳಿಕೊಳ್ಳುವದರಲ್ಲಿ ನನಗೆ ಬಲು ಮಮತೆ. ಅಂತೇ ಅವನ ಹಳ್ಳಿಗೆ ಹೋದಾಗ, ಅದೇ ವಿಷಯದ ಮೇಲೆ ನಾವು ಮಾತನಾಡುತ್ತಿದ್ದೆವು.

"ಅಜೂಪಹಾಡದ ಲಕ್ಷ್ಮೀಶಿಬಿರದ ಪರಿಚಯವು ನಿನಗಿದೆಯೆ?" ಎಂದು ಗೆಳೆಯನು ಕೇಳಿದನು. ಅದೊಂದು ಬಹಳ ವರುಷಗಳಿಂದ ನಡೆದು ಬಂದ ಆಶ್ರಮವೆಂದು ನನಗೆ ಗೊತ್ತಿತ್ತು.

"ಅದರ ವಿಷಯವೇನು?" ಎಂದು ನಾನು ಕುತೂಹಲನಾಗಿ ಕೇಳಿದೆನು. ಗೆಳೆಯನು ಹಳೆಯದಾದ ಕೈಬರೆಹದ ಒಂದು ಚಿಕ್ಕ ಲೇಖನವನ್ನು ತೋರಿಸಿದನು.

ಅದನ್ನು ಓದುವಾಗಲೆ ನನ್ನ ಅಂತಃಕರಣವು ಕಲಮಲವಾಯಿತು. ಬರೆದವರಲ್ಲಿ ಆಳವಾದ ಗೌರವವು ಉತ್ಪನ್ನವಾಯಿತು. ಅದನ್ನು ದೊರಕಿಸಿದ ಬಗೆಯನ್ನು ಕುರಿತು ಗೆಳೆಯನನ್ನು ವಿಚಾರಿಸಿದೆನು.

"ನಮ್ಮಜ್ಜನು ಅನೇಕ ವರ್ಷಗಳ ವರೆಗೆ ಆ ಶಿಬಿರದಲ್ಲಿ ವಾಸಿಸುತ್ತಿದ್ದನು. ಅಲ್ಲಿಯ ಗುರುವಿನ ಮಮತೆಯು ಅವನ ಮೇಲೆ ಬಹಳ. ಅಜ್ಜನು ಅಧ್ಯಯನವನ್ನು ಮುಗಿಸಿ ಬರುವಾಗ, ಗುರುವಿನ ಆ ರಹಸ್ಯಮಯ ಲೇಖನದ ಪ್ರತಿಯೊಂದನ್ನು ಪಡೆದುಕೊಂಡು ಬಂದನು. ಇದು ಅವನ ಕಾಗದಗಳಲ್ಲಿ ಸಿಕ್ಕಿತು." ಎಂದು ಗೆಳೆಯನು ಹೇಳಿದನು.

"ಇಂದು ಆ ಗುರುವಿನ ವಂಶಜರಲ್ಲಿ ಯಾರಾದರೂ ಇರುವರೆ?" ನಾನು ಉತ್ಸುಕತೆಯಿಂದ ಕೇಳಿದೆನು.

" ಅಯ್ಯೋ! ಮಂಕು! ಗೊತ್ತಿಲ್ಲವೆ? ದೇಶಕಾರ್ಯದಲ್ಲಿ ಇಂದಿಗೆ ಅದ್ವಿತೀಯರೆಂದು ಭಾರತದಲ್ಲೆಲ್ಲ ಪ್ರಸಿದ್ಧರಾದ ಸೋ—ರು ಅವರ ಮೊಮ್ಮಗ!"

ಇದು ನನಗೆ ಗೊತ್ತಾದಂದಿನಿಂದ ಆ ಲೇಖನದ ವಿಷಯಕವಾಗಿ ನನ್ನ ಗೌರವವು ಹೆಚ್ಚಿದೆ. ಕನ್ನಡಿಗರಿಗೂ ಪರಿಚಯವಿರಲೆಂದು ಅದನ್ನು ಇಲ್ಲಿ ಭಾಷಾಂತರಿಸಿ ಬರೆಯುತ್ತಿದ್ದೇನೆ ಲೇಖನದಲ್ಲಿ ಊರು ಸ್ಥಲಗಳ ಉಲ್ಲೇಖವಿಲ್ಲ. ನನಗೆ ಹಿಂದಿನಿಂದ ತಿಳಿದಿದ್ದರೂ ಅನಾವಶ್ಯಕವೆಂದು ಅವುಗಳನ್ನು ಇಲ್ಲಿ ಸೇರಿಸಿಲ್ಲ. ಸುಮಾರು ೫೦ ವರುಷಗಳ ಹಿಂದೆ ಈ ಲೇಖನವು ಬರೆದು ಮುಗಿಯಿತೆಂದು ತೋರುತ್ತದೆ

೧

ಲಕ್ಷ್ಮೀದೇವಿಯು ಬಹು ಸುಂದರಿಯಾಗಿದ್ದಳು. ಒಂದು ಶಬ್ದದಲ್ಲಿ ಅವಳ ಸೌಂದರ್ಯವನ್ನು ತೂಗಿ ತೋರಿಸುವದಾದರೆ, ಅವಳು ಸಾಕ್ಷಾತ್ ದೇವಿಯೆಂದೇ ಹೇಳಬೇಕು. ಅವಳಿಗಿಂತ ರೂಪದಲ್ಲಿ ಚೆಲುವೆಯರು ಸಿಕ್ಕಬಹುದು; ಆದರೆ ಅವಳ ಕಣ್ಣುಗಳ ತೇಜ, ಅವಳ ಮುಖದ ಮೋಹಕತೆ, ಅವಳ ನಿಲುವು, ಅವಳ ನಗೆ ಇವು ದೇವನೆಂಬ ಜ್ಯೋತಿಯ ಕಿರಣಗಳಲ್ಲದೆ ಬೇರೆಯಲ್ಲ.

ನಾನು ಅವಳನ್ನು ನೋಡಿದುದು ಹೇಗೆ? ಆಕಸ್ಮಿಕವಾಗಿ. ಅವಳನ್ನು ನೋಡಬೇಕೆಂದು ಕನಸು ಮನಸಿನಲ್ಲಿಯೂ ನಾನು ಬಯಸಿರಲಿಲ್ಲ; ಆದರೆ ಲಕ್ಷ್ಮೀದೇವಿಯು ಹೀಗೆ - ಇಂತಹ ಸ್ಥಿತಿಯಲ್ಲಿ - ತನ್ನ ಪತಿಯೊಡನೆ ಇರುವಳೆಂದು ತಿಳಿದಕೂಡಲೆ, ಸಹಜವಾಗಿ ನೋಡಬೇಕೆಂದೆನಿಸಿತು. ಅದಕ್ಕಾಗಿಯೆ ಅವಳಿದ್ದ ಸೆರೆಮನೆಗೆ ನಾನು ಹೋದದ್ದು. ಹೋದ ಮೇಲೆ ಇಂತಹ ಅನುಪಮ ಸೌಂದರ್ಯವು ನನ್ನ ಕಣ್ಣಿಗೆ ಬೀಳುವದೆಂದೂ ನಾನು ತಿಳಿದಿರಲಿಲ್ಲ; ಆದರೆ ಹೋಗಿ ನೋಡಿದ ಮೇಲೆ ಲಕ್ಷ್ಮೀದೇವಿಯು ಹೀಗಿರದೆ ಮತ್ತೆ ಹೇಗಿರಬೇಕೆಂದಿದ್ದೆ?—ಎಂದೆಂದುಕೊಂಡೆನು. ಇಂದ್ರಲೋಕದಲ್ಲಿ ಇಂಥ ಆನಂದವಿರಬಹುದೆಂದು ಒಮ್ಮೆ ಬುದ್ಧಿಗೆ ಹೊಳೆದರೂ, ಇಲ್ಲಿ ಇದು ಸಹಜವಲ್ಲದೆ ಮತ್ತೇನು ಸಹಜವೆಂದು ಜೀವವು ಕೇಳುತ್ತಿತ್ತು. ದೇವಿಯು ನನ್ನನ್ನು ನಗೆಮೊಗದಿಂದ

ಬರಮಾಡಿಕೊಂಡಳು. ನಾನು ಹೋಗಿರುವದು ಅವಳಿಗೇನು ಆಶ್ಚರ್ಯದ ವಿಷಯವೆಂಬಂತೆ ತೋರಲಿಲ್ಲ. ಸಹಜವಾಗಿ—ಬರುವರೆಂದು ಗೊತ್ತಿದ್ದ ಅತಿಥಿಗಳನ್ನು ಕರೆಯುವಂತೆ—ಅವಳು ನನ್ನನ್ನು ಕರೆದಳು. ಅವಳ ಪತಿಯಾದರೂ ಮಂದಹಾಸದಿಂದ ನನ್ನ ಸ್ವಾಗತಗೈದನು. ನನಗಾದರೂ ವಿಚಿತ್ರವೆನಿಸಲಿಲ್ಲ. ಲಕ್ಷ್ಮೀದೇವಿಯು ಅಲ್ಲಿರುವಳೆಂದು ನಾನು ಹೋದೆನು. ನಾನು ಹೋದೆನೆಂದು ಅವಳು ನನ್ನನ್ನು ಬರಮಾಡಿಕೊಂಡಳು.

"ಈಗ ನಾವು ಚಂದ್ರರಾಜರ ಆತಿಥ್ಯವನ್ನು ಸ್ವೀಕರಿಸಿದ್ದೇವೆ. ಕೂಡಲು ಆಸನಗಳ ಕೊರತೆ. ಕುಳಿತುಕೊಳ್ಳಿರಿ." ಎಂದು ಲಕ್ಷ್ಮೀದೇವಿಯು ನಗುತ್ತ ನುಡಿದಳು. ಅವಳ ಆ ನಗೆಯಲ್ಲಿ ನಸುವೆ ವಿಷಾದವು ಬೆರೆತುಕೊಂಡಿತ್ತು. ನಸುವೆಂದರೆಷ್ಟು? ಹಗಲಿನಲ್ಲಿ ನೆಲದ ಮೇಲೆ ಬೀಳುವ ಮುಗಿಲ ನೆರಳಿನಂತೆ. ಆದರೆ ಅದರ ಕಾರಣವು ಕಲ್ಲೆದೆಯನ್ನು ಕರಗಿಸುವಂತಹದು. ಲಕ್ಷ್ಮೀ ಕೇಶವಕುಮಾರರು ಈಗ ಚಂದ್ರರಾಜರ-ನನ್ನೊಡೆಯರ—ಸೆರೆಮನೆಯಲ್ಲಿ. ಅರಸರು ಅವರನ್ನು ಕಠಿನವಾದ ನಿರ್ಬಂಧದಲ್ಲಿಟ್ಟಿದ್ದರು. ಮರುದಿವಸ ಮುಂಜಾನೆ—ಚುಮು ಚುಮು ನಸುಕಿನಲ್ಲಿ—ಜೀವನದ ತೊರೆಯು ಮತ್ತೆ ಹುರುಪುಗೊಂಡು ಹರಿಯುವ ವೇಳೆಯಲ್ಲಿ—ಅವರಿರ್ವರನ್ನು ಗಲ್ಲಿಗೇರಿಸಬೇಕೆಂದು ಗೊತ್ತಾಗಿತ್ತು! ಲಕ್ಷ್ಮೀದೇವಿಯ ಮುಗುಳ್ನಗೆಯಲ್ಲಿ ನನಗೆ ಕಿಂಚಿತ್ ವಿಷಾದವು ಕಂಡು ಬಂದಿದ್ದರೆ ಅದರ ಕಾರಣವು ಇದೇ ಸರಿ. ಇಷ್ಟೇ.

ಅಲ್ಪ ವೇಳೆಯವರೆಗೆ ನಾವು ಒಬ್ಬರನ್ನೊಬ್ಬರು ನೋಡುತ್ತ ಕುಳಿತೆವು ಯಾರೂ ಮಾತನಾಡಲಿಲ್ಲ. ನನ್ನ ಎರಡೂ ಕಣ್ಣುಗಳ ಗೊಂಬೆಗಳು ಲಕ್ಷ್ಮೀದೇವಿಯ ರೂಪವನ್ನು ತಳೆದಿದ್ದವು. ಒಮ್ಮೆ ನದಿಯ ಮೇಲೆ ತೇಲಿಹೋಗುವ ಕಮಲದಂತ ಅವಳು ನನಗೆ ಕಾಣುತ್ತಿದ್ದಳು. ಎಂದು ಮುಗಿಯುವದೋ ಎಂದು ಭೀತಿಯನ್ನು ಹುಟ್ಟಿಸಿ, ಸಂತತ ಧಾರೆಯಾಗಿ ಪುಟಿಯುವ ಕಾರಂಜಿಯಂತೆ ಇನ್ನೊಮ್ಮೆ ಶೋಭಿಸುತ್ತಿದ್ದಳು. ಅಶೋಕ ವನದಲ್ಲಿಯ ಸೀತೆಯಂತೆ ಮತ್ತೊಮ್ಮೆ ಕಂಗೊಳಿಸುತ್ತಿದ್ದಳು. ಉಸುಬಿನ ಬೈಲಿನಲ್ಲಿ ಕೀರ್ತಿಯ ಲತೆಯೊಂದು, ನಿಶೆಯ ನಿರ್ಜನ ವನದಲ್ಲಿ ಬೆಳಕಿನ ಮಾಮರವೊಂದು,—ಹೀಗೆ ಏನೇನೋ ಆಗಿ ಲಕ್ಷ್ಮೀದೇವಿಯು ನನ್ನ ಕಣ್ಣೆದುರಿನಲ್ಲಿ ಕುಳಿತಿದ್ದಳು.

ಕಡೆಗೊಮ್ಮೆ ದೇವಿಯು ನಕ್ಕಳು. ಮನಸ್ಸಿನಲ್ಲಿ ದೇವಿಗೆ ಕೈಮುಗಿದೆನು. ಮನಸ್ಸಿನಲ್ಲಿ ಆಕೆಗೆ ನನ್ನ ಜೀವವನ್ನು ಅರ್ಪಿಸಿದೆನು.

ಆ ಮಾತು, ಈ ಮಾತು, ರಾಜ್ಯದ – ಮಾತು ದೇವಿಯು ಹೀಗೆ ಮಾತು ಬೆಳೆಸಿದಳು.

"ಕುಮಾರ, ನೀವು ಚಂದ್ರರಾಜರ ಉತ್ಕಟ ಸೇವಕರು. ವರ್ಷಾನುವರ್ಷ ಕಂಪನಿ ಸರಕಾರದವರೊಡನೆ ನಿಮ್ಮ ರಾಜರ ಘನತೆಯನ್ನು ಕಾಯ್ದಿರುವಿರಿ. ದಿಲ್ಲಿಯ ದರಬಾರಿನಲ್ಲಿ, ಉಳಿದ ಸಂಸ್ಥಾನಿಕರಿಗಿಂತ ಅವರ ಗೌರವವು ಪ್ರಶಸ್ತವಾಗುವಂತೆ ಮಾಡಿರುವಿರಿ. ಬಂಡಾಯದ ವೇಳೆಯಲ್ಲಿ ರಾಜರಿಗೂ ಕಂಪನಿಗೂ ಹಗಲಿರುಳು ನೆರವಾಗಿದ್ದೀರಿ. ನಾವು ಬಂಡುಗಾರರೆಂದು ಸೆರೆಯಾಳಾಗಿದ್ದೇವೆ. ಕಂಪನಿಯ ಆಜ್ಞೆಯಂತೆ ರಾಜರು ನಮಗೆ ದೇಹಾಂತ ಶಿಕ್ಷೆಯನ್ನು ವಿಧಿಸಿದ್ದಾರೆ. ನಮ್ಮಲ್ಲಿ ನಿಮಗೇಕೆ ವಿಶ್ವಾಸ?"

ನನಗೆ ಮೆಯ್ಮರೆದ್ದಿತು. ನನ್ನ ದಾಸ್ಯವನ್ನು ಸೂಚಿಸುವ ಹಾಳು ಬಟ್ಟೆಯನ್ನು ತೆಗೆದೊಗೆದು, ಲಕ್ಷ್ಮೀದೇವಿಯ ಸೇವಕನಂತೆ ಉಡುಪು ಧರಿಸಬೇಕೆಂದು ಮನವು ಹರಿಯಿತು. "ದೇವಿ! ನನ್ನ ದೇಹವು ಇನ್ನೂ ಅರಸರ ಋಣದ ಸಂಕೋಲೆಯಲ್ಲಿ ಬಿದ್ದುಕೊಂಡಿದೆ. ನನ್ನ ಜೀವವು ಮಾತ್ರ ನಿಮ್ಮ ದೈವಿಕಸ್ವಾತಂತ್ರ್ಯದಲ್ಲಿ ವಿಹರಿಸಲು ಹಾತೊರೆಯುತ್ತಿದೆ. ಒಂದು ದಿನ ನಾನು ನಿಮ್ಮಂತೆ ದಾಸ್ಯದಿಂದ ಮುಕ್ತನಾಗಬಹುದು."

ಉದ್ವಿಗ್ನಳಾಗಿ ದೇವಿಯು ನುಡಿದಳು. "ಕುಮಾರ, ಯಾವ ದಿನ? ಎಂತಹ ಮುಕ್ತಿ?"

ಆಗ ನನ್ನ ಮನಸ್ಸಿನಲ್ಲಿ ಮೋಡ ಕವಿದಂತಾಯಿತು. ಇಂದು ನನ್ನ ಜೀವನದ ಮೇಲೆ ಅಮೃತದ ಧಾರೆಯನ್ನು ಎರೆದ ದೇವಿಯು, ನಾಳೆ ಇಲ್ಲದಂತಾಗುವಳಲ್ಲ! ಮುಂದೆ ನಾನು ಜೀವಿಸಬಹುದೆ? ಬಿಡುಗಡೆ! ಬಿಡುಗಡೆ! ಎಂದು ಆತ್ಮವು ಕೂಗಿಕೊಂಡಿತು. ದೇವಿ–ಕೇಶವಕುಮಾರರ ಬಿಡುಗಡೆಯೆಂದರೆ ನನ್ನ ಬಿಡುಗಡೆಯೇ ಸರಿ.

ದೇವಿಗೆ ನನ್ನ ವಿಚಾರಲಹರಿಗಳು ತಿಳಿದಿರಬಹುದು. ಅದಕ್ಕಂತೆ ಅಷ್ಟು ಭಾವಗರ್ಭಿತವಾದ ನಗೆಯನ್ನು ನಕ್ಕಳು. "ಕುಮಾರ, ನೀವು ನಮ್ಮ ಪಾಡಿಗಾಗಿ ವ್ಯಥೆಪಡಬೇಡಿ. ಮರಣವೆಂದರೆ ನಮಗೆ ಹಬ್ಬವಾಗಿದೆ. ಜನ್ಮಭೂಮಿಗೆ ಜೀವಕಳೆಯಿಲ್ಲವೆಂದು ಕದನವೆಸಗಿದೆವು. ಸಫಲವಾಗ ಲಿಲ್ಲ. ಸ್ವಾತಂತ್ರ್ಯವಿದ್ದೆಡೆಗೆ ತೆರಳುತ್ತಿದ್ದೇವೆ."

ನನ್ನ ಎದೆಯು ಕರಗಿ ನೀರಾಯಿತು. ದೇವಿಯೇ ಇಲ್ಲದಂತಾದರೆ ಪ್ರೇಮವನ್ನು ಅರಸುತ್ತ ನಾನೆಲ್ಲಿ ಅಲೆಯಬೇಕು? ತಡವರಿಸಿಕೊಂಡು ಎದ್ದೆನು. ದೇವಿ–ಕುಮಾರರನ್ನು ಬೀಳ್ಕೊಂಡು ಲಗುಬಗೆಯಿಂದ ಅರಸ ರೆಡೆಗೆ ಸಾಗಿದೆನು.

೨

ಅದೇ ಸಂಜೆಯಾಗಿತ್ತು. ಅಂದು ದರಬಾರವು ನೆರೆಯುವದಿತ್ತು. ಕಂಪನಿ ಸರಕಾರಕ್ಕೆ ದೊರೆತ ಅಪೂರ್ವ ವಿಜಯದಲ್ಲಿ ಚಂದ್ರರಾಜರು ಭಾಗಿಗಳಾಗಿದ್ದರು. ಕಾರಣ ಅವರಿಗೆ ಮನ್ನಣೆಯಿತ್ತು, ಯಶಸ್ಸಿನಲ್ಲಿ ಪಾಲುಗಾರರಾಗಲು ಊರಿನ ಪ್ರಮುಖರೆಲ್ಲ ಕೂಡಿದ್ದರು. ರಾಜ್ಯದ ಮುಖ್ಯಾಧಿಕಾರಿಗಳು ಸಭೆಯ ಕಾರ್ಯವನ್ನು ವಿಜೃಂಭಣೆಯಿಂದ ಸಾಗಿ ಸಲು ಬದ್ಧಕಂಕಣರಾಗಿದ್ದರು. ಸ್ವತಃ ದೊರೆಗಳೇ ನನಗೆ ಆಮಂತ್ರಣ ವಿತ್ತಿದ್ದರು. ಕಾರಣ ಅವರಿಗಾಗಿ ನಾನು ಅರಮನೆಯಲ್ಲಿ ದಾರಿ ಕಾಯದೆ, ನೆಟ್ಟಗೆ ಸಭಾಮಂಟಪದೆಡೆಗೆ ಧಾವಿಸಿದೆನು. ಸಭೆಯಲ್ಲಿಯ ಅಂದಿನ ದೀಪಮಾಲೆ, ಮಹೋತ್ಸವ,— ಇವೆಲ್ಲ ಎಂದೋ ಮರೆತುಹೋಗಿವೆ. ಆದರೆ ನಾನು ಸಭೆಗೆ ಹೋಗುವಾಗ ನನ್ನೆದೆಯನ್ನು ದಹಿಸಿದ ಪರಿತಾಪವು ಇಂದಿಗೂ ಕುದಿಯುತ್ತಿದೆ.

ಸಭೆಯು ಮುಗಿದ ಮೇಲೆ ದೊರೆಗಳೊಡನೆ ಮಾತನಾಡಿಕೊಳ್ಳುವ ದೆಂದು ಮನದಲ್ಲಿ ನುಡಿದುಕೊಂಡೆನು. ಆದರೆ ದೈವವು ಬೇರೊಂದು ಬಗೆಯಿತು. ಪ್ರಮುಖರನೇಕರು ಅಭಿನಂದನಪರ ಭಾಷಣಗಳನ್ನು ಮಾಡಿದರು. ಸಮಯೋಚಿತವಾಗಿ ನಾನಾದರೂ ನಾಲ್ಕು ಮಾತು ಹೇಳಬೇಕು. ಇಷ್ಟರಲ್ಲಿ ಮೇಲಧಿಕಾರಿಯೊರ್ವನು ತನ್ನ ವಾಣಿಯನ್ನು ಚಮಕಿಸಿದನು. ಶಂಕರಸಿಂಗನೆಂದರೆ ಮುಖಸ್ತುತಿಯ ಭೃಂಗವೆಂದು

ನನಗೆ ಗೊತ್ತಿತ್ತು. ಅವರೆದುರಿಗೆ ಲಾಂಗೂಲಚಾಲನ ಮಾಡಿ, ಇವರ ಕಿವಿಯಲ್ಲಿ ಊದಿನಕಡ್ಡಿ ಹಚ್ಚಿ ಅವನು ಈ ಪದವಿಗೇರಿದ್ದನು. ಅವನ ಕಾಗದದ ಹೂಗಳು ಸುರಿಯುವವರೆಗೆ ನಾನು ಸಹಿಸಿಕೊಂಡಿರಬಹುದಾಗಿತ್ತು. ಆದರೆ ರೀತಿಯಲ್ಲಿ ನಾವೀಸ್ಟು ಬೇಕಲ್ಲ? ಎಲ್ಲರ ಹಾಗೆ ಹೊಗಳಿ ಮುಗಿಸಿದರೆ ಹೇಗೆ? ಶಂಕರಸಿಂಗನು ದೊರೆಗಳ ಪರಾಕ್ರಮವನ್ನು ನುತಿಸಿದ್ದಲ್ಲದೆ, ಸರೆಮಾಳುಗಳನ್ನು ಹೀಯಾಳಿಸಿದನು. ಕೇಶವ ಕುಮಾರರನ್ನು ಬಂಧಿಸಿದುದು ಅಮೋಘವಾದ ಯಶಸ್ಸೆಂದು ಸಾರಿದನು. 'ಲಕ್ಷ್ಮೀದೇವಿಯು ತನ್ನ ರೂಪದ ವ್ಯೂಹವನ್ನೊಡ್ಡಿ, ಜನರನ್ನು ಅರಾಜಕತೆಗೆ ಎಳೆಯುತ್ತಿದ್ದಳು. ಕೇಶವಕುಮಾರರಿಗಿಂತ ಲಕ್ಷ್ಮೀದೇವಿಯೇ ತೊಂದರೆಗಳ ತವರಾಗಿದ್ದಳು. ಕಾರಣ ಪತಿಯೊಡನೆ ದೇಹಾಂತ ಶಾಸನವು ಈ ಜಾ–ರಿ–ಣಿ–ಗೆ........ ...'

"ಎಚ್ಚರ! ಏನೆನ್ನುವಿರಿ!" ಎಂದು ಅರಿವಿಲ್ಲದೆ ಖಡ್ಗವನ್ನು ಒರೆಯಿಂದ ಹಿರಿದು ನಾನು ಕೂಗಿಕೊಂಡೆದ್ದೆನು. ಸಭೆಯೆಲ್ಲ ಉಲ್ಲೋಲಕಲ್ಲೋಲವಾಯಿತು. ಇರ್ವರು ರಾಜದೂತರು ಬಂದು, ನನ್ನನ್ನು ಬಲವಾಗಿ ಹಿಡಿದುಕೊಂಡರು ಆದರೆ ನನ್ನ ಹುಮ್ಮಸವು ತೀರಲಿಲ್ಲ. "ಖಬರ್ದಾರ್! ಶಂಕರಸಿಂಗ! ನೀವು ದೊರೆಗಳನ್ನು ಮನಬಂದಂತೆ ಹೊಗಳಿರಿ. ಆದರೆ ವೃಥಾರೋಪಗಳನ್ನು ಉಳಿದವರ ಮೇಲೆ ಹೊರಿಸಬೇಡಿರಿ. ಲಕ್ಷ್ಮೀದೇವಿಯವರ ಯೋಗ್ಯತೆಯು ನಿಮಗಿನ್ನೂ ತಿಳಿದಿಲ್ಲ."

"ನಿಮಗೆ ಮಾತ್ರ ಚೆನ್ನಾಗಿ ತಿಳಿದಿದೆ' ಎಂದು ಶಂಕರಸಿಂಗನು ಗಹಗಹಿಸಿ ನಕ್ಕನು. ದೊರೆಗಳ ಅಂಗರಕ್ಷಕರು ನನ್ನನ್ನು ಸುತ್ತುಗಟ್ಟಿರುವದು ಅವನಿಗೆ ಪೂರ್ಣವಾಗಿ ಮನವರಿಕೆಯಾಗಿತ್ತು. ಸಭಿಕರೆಲ್ಲರೂ ಹುಚ್ಚೆದ್ದು ನಕ್ಕರು. ನನ್ನ ತಲೆಗೆ ಪಿತ್ತವೇರಿತು.

ಚಂದ್ರರಾಜರು ಕೂಡ ಈ ಉಲ್ಲಾಸದಲ್ಲಿ ತುಸು ದನಿಗೂಡಿಸಿದರು. ಆ ಮೇಲೆ ಗಂಭೀರರಾಗಿ ನನ್ನನ್ನು ದಿಟ್ಟಿಸಿ ನೋಡಿ:– "ಕುಮಾರ, ಮುಂಜಾವಿನಲ್ಲಿ ನಟ್ಟಗಿದ್ದ ನೀವು ಈಗ ಅಸ್ತವ್ಯಸ್ತರೇಕೆ? ರಾಜದ್ರೋಹಿಗಳನ್ನು ನಿಮ್ಮಂಥ ರಾಜನಿಷ್ಠರು ಸಮರ್ಥಿಸಬೇಕೆ? ತುಸು ಸಾವಧಾನವಿರಲಿ. ನಿಮ್ಮ ಹೆಸರಿಗೆ ಕಲಂಕ ಬೇಡ."

ದೊರೆಗಳ ಮಾತುಗಳು ಕಠಾರಿಯಂತೆ ನನ್ನೆದೆಯನ್ನಿರಿದವು. ಆದರೂ ಸಾವರಿಸಿಕೊಂಡು ಕೈಜೋಡಿಸಿ ಮಾತನಾಡಿದೆನು. ಸರಕಾರ, ಲಾಲಿಸಬೇಕು. ತಪ್ಪು ಕ್ಷಮಿಸಬೇಕು. ಹೀನರ ನುಡಿಯಿಂದ ಬಿಡಿಗೊಂಡು ಹೀಗೆ ಹರಿಹಾಯ್ದನು. ನಾನು ತಮ್ಮ ಚರಣಸೇವಕನು. ತಮ್ಮ ಋಣದಲ್ಲಿ ಬೆಳೆದಿದ್ದೇನೆ. ಸ್ವಾಮಿಯ ಕಾರ್ಯವೆಂದರೆ ದೇವನ ಆಜ್ಞೆಯಿದ್ದಂತೆ.'' ಪಳಪಳನೆ ನನ್ನ ಕಂಗಳಿಂದ ಅಶ್ರುಧಾರೆಯು ಸುರಿಯಹತ್ತಿತು.

ದೊರೆಗಳ ಮುಖವು ಮತ್ತಿಷ್ಟು ಗಂಭೀರವಾಯಿತು. ''ಬಿಜಯಕುಮಾರ, ಅನನ್ನೆಲ್ಲ ನೀವು ನನಗೆ ಹೇಳಬೇಕೆ? ನಾನು ಪಟ್ಟಕ್ಕೆ ಬಂದಂದಿನಿಂದ, ಸಭೆಯಲ್ಲಿ ಹೀಗೆ ನನ್ನೆದುರು ಖಡ್ಗವನ್ನು ಯಾರೂ ಝಳಪಿಸಿದ್ದಿಲ್ಲ. ನೀವು ಹಾಗೆ ಮಾಡಿದಿರಿ. ನಾನು ಸುಮ್ಮನಿದ್ದೇನೆ.''

''ಮಹರಾಜ, ಅದಕ್ಕೆಂದೇ ನಾನು ಪ್ರಾರ್ಥಿಸುವದು. ತಮ್ಮ ದಯೆಯಿಲ್ಲದೆ ನಾನು ಇಂದಿನ ವರೆಗೆ ಬದುಕುತ್ತಿರಲಿಲ್ಲ. ತಮ್ಮ ಕಾರ್ಯದಲ್ಲಿ ತತ್ಪರನಾದುದಲ್ಲದೆ ನಾನು ಯಾವ ಜನ್ಮಹವನ್ನೂ ಮುಂದೆ ಚಾಚಿರಲಿಲ್ಲ, ಇಂದು ಮಾತ್ರ ಮನ್ನಿಸಬೇಕು. ತಮ್ಮ ಸೇವೆಯಲ್ಲಿ ನನ್ನ ಜೀವವನ್ನು ಸವೆಯಿಸುವ ಆಶೆಯು ಇನ್ನೂ ನನಗಿದೆ. ಆದರೆ ಒಂದು ಅಭಿಲಾಷೆಯ ಮೇಲೆ ನನ್ನ ಬಾಳುವೆಯು ತೆಳಹದಿಯೋ ನಿಂತದೆ.''

ದರಬಾರವೆಲ್ಲ ನನ್ನ ಮಾತು ಕೇಳಿ ಸ್ತಬ್ಧವಾಗಿತ್ತು. ಶಂಕರಸಿಂಗನು ಶಿಖಿಯಾಗಿ ಮೆರೆಯುದ ದಾವಾಗ್ನಿಯಂತೆ ದಿಟ್ಟಿಸುತ್ತಿದ್ದನು. ಅರಸರು ಮತ್ತೆ ಅನುಗ್ರಹಿಸಿದರು ''ಕುಮಾರ, ನಿಮ್ಮ ಇಚ್ಛೆಯೇನಿದೆ-ಕೇಳಿಕೊಳ್ಳಬಹುದು. ತಿಳಿಯದೆ ಹೇಗೆ ನೆರವೇರಿಸುವನು?''

ಮನದಲ್ಲಿದ್ದ ಧೈರ್ಯವನ್ನೆಲ್ಲ ನಾಲಗೆಯ ತುದಿಯ ಮೇಲೆ ಒಟ್ಟುಗೂಡಿಸಿ ನಾನು ನುಡಿದೆನು: ''ಕೇಶವಕುಮಾರ ಲಕ್ಷ್ಮೀದೇವಿಯರ ಪ್ರಾಣದಾನ ಗೆಯ್ಯಬೇಕು. ದೊರೆಗಳು ಬಡವನ ಈ ಪ್ರಾರ್ಥನೆಯನ್ನು ಮನ್ನಿಸಬೇಕು.''

ಸಭೆಯು ನಿಶ್ಯಬ್ದವಾಗಿತ್ತು. ಶಂಕರಸಿಂಗನು ರಾಜರನ್ನೇ ಎವೆಯಿಕ್ಕದೆ ನೋಡುತ್ತಿದ್ದನು. ದೊರೆಗಳ ಗಾಂಭೀರ್ಯದಲ್ಲಿ ನಡುವೆ ಕೋಪವು ಬೆರೆತುಕೊಂಡಿತು.

"ಕುಮಾರ, ಈ ತೆರದ ಬಿನ್ನಹವು ನಿಮ್ಮಿಂದ ಬರುವದೆಂದು ನನಗೆನಿಸಿರಲಿಲ್ಲ. ನೀವು ಹೆಸರೆತ್ತಿದ ರಾಜದ್ರೋಹಿಗಳು ಪರಿಪರಿಯಾಗಿ ನಮ್ಮನ್ನು ಪೀಡಿಸಿದ್ದಾರೆ. ಅವರನ್ನು ಸೆರೆ ಹಿಡಿದಾಗಲೆ ಕಂಪನಿ ಸರಕಾರದೊಡನೆ ನಮ್ಮ ವರ್ಚಸ್ಸು ಹೆಚ್ಚಿದೆ. ಅವರನ್ನು ಬಿಟ್ಟು ಬಿಡುವದೆಂದರೆ ನಮ್ಮ ಮೋರೆಗೆ ನಾವೇ ಕಲಂಕವನ್ನು ಬಡಿದುಕೊಂಡಂತೆ. ಈ ವಿಷಯುವನ್ನು ಪುನಃ ಪ್ರಸ್ತಾಪಿಸುವವರು ರಾಜದ್ರೋಹಿಗಳಾಗುವರು."

ನಿಂತಲ್ಲಿ ನನ್ನ ಜೀವವು ಕುಸಿದಿತು. ಇನ್ನು ಬದುಕುವದು ಹೇಗೆ? ಅಲ್ಲಿಯೇ ನನ್ನ ಕೆಲಸಕ್ಕೆ ಶರಣು ಹೊಡೆದು,ಲಕ್ಷ್ಮೀದೇವಿಯೊಡನೆ ಸತ್ತು ಬಾಳಬೇಕೆಂದು ಮನವು ಹಂಬಲಿಸಿತು. ಉಳಿದವರ ಭಾವನೆಗಳನ್ನು ಹುಲ್ಲೆಂದು ಭಾವಿಸುವ ಅರಸನನ್ನು ನಾನು ಇಲ್ಲಿಯು ವರೆಗೆ ಸೇವಿಸಿದುದು ಹೇಗೆ?

ಅಷ್ಟರಲ್ಲಿ ಶಂಕರಸಿಂಗನು ಎದ್ದು ನಿಂತನು. 'ಮಹರಾಜ, ಒಳಸಂಚುಗಾರರೊಡನೆ ಬೆರೆತು,ದೊರೆಗಳ ಹಿತವನ್ನು ದುರ್ಲಕ್ಷಿಸುವ ದೂಷಿತರಿಂದ ನನ್ನ ಭಾಷಣಕ್ಕೆ ತಡೆ ಬಂದಿತು. ರಾಜಕಾರಣದಲ್ಲಿ ರಾಕ್ಷಸಿಯರಂತೆ ಕಾಲಿಡುವ ಚೆಲುವೆಯರಾದ ಸ್ತ್ರೀಯರು........"

ಮುಂದೆ ಶಂಕರಸಿಂಗನು ಹೇಳುವ ಮಾತು ನನ್ನ ಮನಸ್ಸಿನಲ್ಲಿ ಮಿಂಚಿ ಹೋಯಿತು. ಜಾ....ರಿ....ಣಿ. ಈ ಕಠೋರ ಶಬ್ದದ ಪುನರಾವೃತ್ತಿಯನ್ನು ತಡೆಯುವದು ಹೇಗೆ? ನನ್ನ ಕೈಯಿಂದ ತಡೆಯಿಲ್ಲದೆ ಸಾಗಿ ಹೋದ ಕಠಾರಿಯು ಆ ನೀಚನ ಮರ್ಮವನ್ನು ಭೇದಿಸಿತು. ಕ್ಷಣಮಾತ್ರದಲ್ಲಿ ರಕ್ತದ ಮಡುವಿನಲ್ಲಿ ಶಂಕರಸಿಂಗನು ಮೃತನಾಗಿ ಬಿದ್ದಿದ್ದನು. ಸಭೆಯಲ್ಲೆಲ್ಲ ಹಾಹಾಕಾರವೆದ್ದಿತು.

ರಾಜಾಜ್ಞೆಯಂತೆ ದೂತರು ನನ್ನನ್ನು ಬಂಧಿಸಿ, ಸೆರೆಮನೆಯೆಡೆಗೆ ಸಾಗಿಸಿದರು. ಅಭಿನಂದನಕ್ಕಾಗಿ ಕಲೆತಿದ್ದ ಸಭೆಯು ಅಸ್ತವ್ಯಸ್ತವಾಗಿ ಮುಗಿದು ಹೋಯಿತು.

೩

ಅಂದು ರಾತ್ರಿ ಕತ್ತಲೆಯ ಕೋಣೆಯಲ್ಲಿ ನಾನು ಕೊಳೆಯುತ್ತಿದ್ದೆನು. ನನ್ನ ಕ್ರೋಧದ ಜ್ವಾಲೆಯು ಇನ್ನೂ ಶಾಂತವಾಗಿರಲಿಲ್ಲ. ದಿಕ್ಕು

ದಿಕ್ಕುಗಳಿಗೆ ವಿಚಾರಗಳು ಹರಿಯುತ್ತಿದ್ದವು. ಇಂಥ ಅರಸನನ್ನು ವ್ಯರ್ಥವಾಗಿ ಸೇವಿಸಿದೆನಲ್ಲವೆ? ಆದರೆ ಆ ನೀಚನ ಮೇಲಿನ ಸಿಟ್ಟು ಚೆನ್ನಾಗಿ ತೀರಿತು. ನನಗೆ ಯಮಯಾತನೆಯು ಬಂದರೂ ಚಿಂತೆಯಿಲ್ಲ. ದೇಹದ ದಾಸ್ಯವನ್ನು ತೊರೆದು, ಇಂದು ಜೀವದೇವನ ರಾಜ್ಯದಲ್ಲಿ ಕಾಲಿಟ್ಟಿದ್ದೇನೆ. ಬಂದ ದುಃಖಗಳನ್ನು ಭೋಗಿಸಿಯೇ ತೀರಬೇಕು. ಆದರೆ ಲಕ್ಷ್ಮೀದೇವಿಯನ್ನು ಕಾಣುವದು ಹೇಗೆ?

ಬರಬರುತ್ತ ಜೀವನದ ನೀರಸತೆಯೂ ಅನ್ಯಾಯವೂ ಕಣ್ಣೆದುರು ಕುಣಿಯತೊಡಗಿದವು. ಈ ಜಗತ್ತಿನಲ್ಲಿ ಜೀವಜ್ಯೋತಿಗಳಿಗೆ ಸ್ಥಾನವಿಲ್ಲವೆ? ಕತ್ತಲೆ ಕವಿದು, ತಲೆ ತಿರುಗಿ ಘಣಗುಟ್ಟಿತು. ಅಷ್ಟರಲ್ಲಿ ಸೆರೆಮನೆಯ ಬಾಗಿಲು ಮೆಲ್ಲನೆ ತೆರೆದಂತಾಗಿ, ಲಕ್ಷ್ಮೀದೇವಿಯು ಪ್ರವೇಶಿಸಿದಳು. ಅದು ಕನಸೋ ನನಸೋ ನಾನರಿಯೆ. ಇಂದಿಗೂ ಅದರ ಬಗೆಯನ್ನು ತಿಳಿಯದಾಗಿದ್ದೇನೆ. ಆದರೆ ಇಷ್ಟು ಮಾತ್ರ ನಿಜ; ಹತಭಾಗ್ಯನಾದ ನನ್ನ ಭಾಗ್ಯವನ್ನು ಆ ಕ್ಷಣವು ಇಂದಿಗೂ ತೆರೆದಿಟ್ಟಿದೆ.

ಲಕ್ಷ್ಮೀದೇವಿಯು ಬಂದೊಡನೆ ಕೋಣೆಯೆಲ್ಲ ಪ್ರಕಾಶಮಾನವಾಯಿತು. ಅವಳ ಎತ್ತರವಾದ ನಿಲುವು, ಗಂಭೀರವಾದ ನಗೆ, ಮೌನವಿರಲು ಆಣತಿಯೆಸಗುವ ತುಟಿಯ ಮೇಲಿನ ಆ ಬೆರಳು,— ಇವೆಲ್ಲ ನನ್ನ ಯಾತನೆಯನ್ನು ಕಳೆದು ಆನಂದಿತನನ್ನಾಗಿ ಮಾಡಿದವು.

"ದೇವಿ! ಹೀಗೆ ನೀವು ಬರಬಾರದು. ಕಾವಲುಗಾರನು ಹಿಂಸೆಪಡಿಸಬಹುದು." ಎಂದು ಮಲಗಿಕೊಂಡಲ್ಲಿ ನಾನು ನುಡಿದೆನು.

ದೇವಿಯು ಮೃದುವಾಗಿ ನಕ್ಕಳು. "ಕುಮಾರ, ನೀವು ನನ್ನ ಬರವನ್ನು ನಿರೀಕ್ಷಿಸುತ್ತಿರಲು, ನಾನು ಬರದಿರುವದು ಹೇಗೆ?"

ಕ್ಷಣ ಹೊತ್ತು ಎಲ್ಲ ಸ್ತಬ್ಧವಿತ್ತು. ಮತ್ತೆ ದೇವಿಯು ಮಾತನಾಡಿದಳು. "ಕುಮಾರ, ಇಂದು ನೀವು ಸೆರೆಯಾಳುಗಳು. ಆದರೆ ವಿಜಯಶಾಲಿಗಳಾಗಿದ್ದೀರಿ. ಇಂದಿನ ನಿಮ್ಮ ವಿಜಯವು ನೂರು ವಿಜಯಗಳನ್ನು ಸ್ಫುರಿಸುವಂತಹದು. ಈ ಸ್ಥೈರ್ಯವು ಎಂದಿಗೂ ಕದಲದಿರಲಿ."

"ದೇವಿ; ಎಲ್ಲವನ್ನೂ ತೊರೆದು ನಿಮ್ಮೆಡೆಗೆ ಬಂದಿದ್ದೇನೆ. ಇನ್ನು ಅಗಲಿಕೆಯಿಲ್ಲವಷ್ಟೇ?" ಎಂದು ನನ್ನ ಕ್ಷೀಣವಾಣಿಯು ದೀನವಾಗಿ ಕೇಳಿತು.

ದೇವಿಯು ನಕ್ಕಳು. ಆದರೆ ನಗೆಯಲ್ಲಿ ವಿಷಾದವಿತ್ತು. "ಕುಮಾರ, ನಾವು ಇನ್ನು ಪಯಣ ಬೆಳೆಯಿಸುತ್ತೇವೆ." ತುಸು ಹೊತ್ತು ದೇವಿಯು ವಿಚಾರಿಸಿದಳು. ಅವಳ ಕಣ್ಣಲ್ಲಿ ಶೋಕವು ಒತ್ತರಿಸಿತು. ಕುಮಾರ, ಹೀಗೆ ನನ್ನ ಕರುಳನ್ನು ಕೆರಳಬೇಡಿರಿ. ನಾನು ನಿಮ್ಮ ಭಗಿನಿಯಲ್ಲವೆ? ನನ್ನ ಪ್ರೇಮವನ್ನು ಪೂರ್ತಿಗೊಳಿಸಲು ನಾನೊರ್ವ ಧೀರನನ್ನು ವರಿಸಿದೆನು ಆದರೆ ಪ್ರೇಮದ ವಿರಾಮವನ್ನು ತಡೆಯದೆ ಹೋದೆನು. ಜಗತ್ತಿನಲ್ಲಿ ಸಂಗ್ರಾಮವೆಂದೂ ಸ್ವರ್ಗದಲ್ಲಿ ಪ್ರೇಮವೆಂದೂ ಈಶ್ವರನ ಕೃಪೆ ವಿದ್ದಂತೆ ತೋರುತ್ತದೆ. ನೀವು ಬದುಕಿದಲ್ಲಿ ಪ್ರೇಮವು ಲಭಿಸುವ ತಾಣವನ್ನು ತೋರಿಸಲೆ?"

ಚಿತ್ರದ ಗೊಂಬೆಯಂತೆ ನಾನು ಸಮ್ಮತಿಯಿತ್ತೆನು.

"ಅಲ್ಲಿ ನೋಡಿ! ಅಬೂಪಹಾಡ!" ಎಂದು ದೇವಿಯು ಬೆರಳು ಮಾಡಿ ತೋರಿಸಿದಳು. ನಾನು ಹೊರಳಿ ನೋಡಿದೆನು. ಅಬೂಪಹಾಡದ ಪರ್ವತಶ್ರೇಣಿಯು ಮೆರೆಯುತ್ತಲಿತ್ತು. ಆದರಡಿಗೆ ಒಂದು ಹಳ್ಳಿ. ಹಳ್ಳಿಯ ಒರ್ವ ವೃದ್ಧನ ಮನೆಯಲ್ಲಿ, ಪರಮಸುಂದರಿಯಾದ ತರುಣಿಯು ಧ್ಯಾನಿಸುತ್ತ ಕುಳಿತುಕೊಂಡಿದ್ದಳು. ಅವಳ ಮೈಕಟ್ಟಿಲ್ಲ ಅಚ್ಚಳಿಯದೆ ಲಕ್ಷ್ಮೀದೇವಿಯನ್ನು ಹೋಲುತ್ತಿತ್ತು. ಆದರೆ ಕರ್ಮಯೋಗದಲ್ಲಿ ಅಡಿಯಿಡುವ ಮುಂಚೇ ತಪಸ್ಸಿಗಾಗಿ ಕುಳಿತ ದೇವಿಯಂತೆ, ಕನ್ನೆಯು ಶೋಭಿಸುತ್ತಿದ್ದಳು. ಅವಳನ್ನು ನೋಡಿ ನನ್ನ ಮನವು ಸುಪ್ರಸನ್ನವಾಯಿತು.

ಮತ್ತೆ ಹೊರಳಿ ನೋಡಿದೆನು. ಲಕ್ಷ್ಮೀದೇವಿಯು ಮಾಯವಾಗಿದ್ದಳು. ಕತ್ತಲೆಯು ಕೋಣೆಯನ್ನು ಕವಿದುಕೊಂಡಿತ್ತು. ಮತ್ತೆ ಯಾತನೆ, ಸಂಕಟ, ನೋವು. ನಾನು ರೇಗಿದೆನು, ಚೀರಿದೆನು, ಆಕ್ರೋಶಿಸಿದೆನು. ಕತ್ತಲೆಯು ಕದಲಲಿಲ್ಲ; ಕದವು ತೆರೆಯಲಿಲ್ಲ.

೪

ಮುಂದೆ ನಾನು ಸೆರೆಮನೆಯಲ್ಲಿ ಕಾಲ ಕಳೆದ ಬಗೆಯು ಇಂದಿಗೂ ನನಗೆ ತಿಳಿಯದಾಗಿದೆ. ಮನವೆಲ್ಲ ಶೂನ್ಯವಾಗಿ ಜೀವಿತವು ಘೋರ ಕಾನನವಾಯಿತು, ಪಂಜರದಲ್ಲಿಯ ಗಿಳಿಯು ಮುಗಿಲನ್ನು ನೋಡು

ವಂತೆ, ಹಗಲು ರಾತ್ರಿ ನಾನು ಕೋಣೆಯ ಬಾಗಿಲನ್ನು ದಿಟ್ಟಿಸುತ್ತಿದ್ದೆನು. ನನಗೆ ಹೊಳೆಯುವ ಚಿತ್ರಗಳು ಎರಡು: ಮಾಯವಾದ ಲಕ್ಷ್ಮೀದೇವಿ ಆಕೆ ತೋರಿಸಿದ ಅಬೂಪಹಾಡ.

ಆಗ ನಾನು ಭ್ರಮಿಷ್ಟನಾಗಿದ್ದೆನೆಂದು ಹಿಂದುಗಡೆ ನನಗೆ ತಿಳಿಯಿತು. ಆರು ತಿಂಗಳವರೆಗೆ 'ಲಕ್ಷ್ಮೀದೇವಿ' ಎಂದು ಕನಕರಿಸಿದೆನು. ಸೆರೆಮನೆಯಲ್ಲಿ ಹೊರಳಾಡಿದೆನು. 'ಅಬೂಪಹಾಡ' ಎಂದು ಕೂಗಿಕೊಂಡೆನು, ನನ್ನ ವಿಷಯಕವಾಗಿ ದೊರೆಗಳ ಮನೋನಿಶ್ಚಯವೇನಾಗಿತ್ತೋ ನಾನರಿಯೆ. ಅದೇನೆ ಇರಬಹುದು; ನನ್ನ ದುಃಸ್ಥಿತಿಯನ್ನು ನೋಡಿ ಅವರಿಗೆ ಕರುಣೆ ಬಂದಿರಬೇಕು. ಅವರಿಗೂ ಕಂಪನಿ ಸರಕಾರದವರಿಗೂ ಪತ್ರವ್ಯವಹಾರವು ನಡೆದಿರಬೇಕು. ನನ್ನ ಸಂತತವಾದ ಸ್ವಾಮಿನಿಷ್ಠೆಯು ಅಚಲವಿದ್ದು, ಭ್ರಮೆಯ ಮೂಲಕ ಹಾಗೆ ವರ್ತಿಸಿದೆನೆಂದು ಅವರು ತಿಳಿದಿರಬೇಕು. ಅಂತೂ ನನ್ನ ವಿಮೋಚನೆಯು ಎಲ್ಲರಿಗೂ ಒಪ್ಪಿಗೆಯಾಯಿತು. ಅಂತೇ ಸೆರೆಮನೆಯಿಂದ ನನ್ನನ್ನು ಕರೆದೊಯ್ದು, ವಿವಿಧೋಪಾಯಗಳಿಂದ ನನಗೆ ಪ್ರಜ್ಞೆ ಬಂದ ಮೇಲೆ, ರಾಜ್ಯದ ಗಡಿನಾಡು ದಾಟಿಸಿ ನನ್ನನ್ನು ಬಿಟ್ಟುಬಿಟ್ಟರು. ತಿರುಗಿ ರಾಜ್ಯವನ್ನು ಹೊಕ್ಕುದಾದರೆ ದೇಹದಂಡನೆಯೆಂದು ಸಾರಿ ಹೇಳಿದರು.

ನನಗೆಲ್ಲಿ ರಾಜ್ಯದಲ್ಲಿರುವುದು ಬೇಕು? ಯಾರ ಸೇವೆಯಲ್ಲಿಯೂ ನಾನು ನನ್ನ ಜೀವವನ್ನು ಸವೆಯಿಸುವ ಹಾಗಿರಲಿಲ್ಲ. ಅದರ ಹಸಿವನ್ನು ಹಿಂಗಿಸುವದೇ ನನ್ನ ಹಂಬಲಿಕೆಯಲ್ಲವೆ? ಮುಕ್ತನಾದೊಡನೆ ನೇರವಾಗಿ ಅಬೂಪಹಾಡವನ್ನು ಗುರಿಯಿಟ್ಟು ಸಾಗಿದೆನು. ಹಾದಿಯಲ್ಲಿಯ ನೀರು; ಕಾಡಿನಲ್ಲಿಯ ಹಣ್ಣು. ಹಣ್ಣು ಹರಿಯಲು ಕೂಡ ಅವಕಾಶವಿರಲಿಲ್ಲ. ನಾನು ಸೆರೆಮನೆಯಲ್ಲಿ ಕಂಡ ಹಳ್ಳಿಯನ್ನು ಶೋಧಿಸತೊಡಗಿದೆನು.

ಕಡೆಗೊಮ್ಮೆ ಮರಗಳ ಗುಂಪಿನಲ್ಲಿ ಆ ಹಳ್ಳಿಯು ಕಾಣಿಸಿಕೊಂಡಿತು. 'ಕನಸು' ಹೀಗೆ ದಿಟವಾದುದನ್ನು ಕಂಡು ನನಗೆ ಪರಮಾಶ್ಚರ್ಯವಾಯಿತು. ಮುಂದೆ ನೋಡಬೇಕಾದುದು ಆ ಮುದುಕನ ಗುಡಿಸಿಲು. ಅಗಸೆಗಲ್ಲಿನ ಹತ್ತಿರ ದಾರಿ ಹೋಗುವವರನ್ನು ನೋಡುತ್ತ, ಊರು

ಗೋಲು ಹಿಡಿದ ವೃದ್ಧನೊಬ್ಬನು ಸಾಗಿದ್ದನು. ನಾನು ಸಮೀಪಿಸಿದೊಡನೆ ಮಾತನಾಡಿಸಿದನು.

" ನಿಮ್ಮ ಹೆಸರೇನು, ಮಹಾಸ್ವಾಮಿ "

" ವಿಜಯ ಕುಮಾರ."

" ಇಲ್ಲಿಗೇಕೆ ಆಗಮನ ?"

" ದೇಶಭಗಿನಿ ಲಕ್ಷ್ಮೀದೇವಿಯವರ ಗುರುತಿನವರು ಇಲ್ಲಿರು ರಂತೆ. ಅವರನ್ನು ಕಾಣಲು ಬಂದಿದ್ದೇನೆ."

" ಮಹರಾಜ, ನಾನೇ ದೇವಿಯವರ ಅಡಿಯಾಳು, ಪ್ರೇಮಚಂದ. ತಾವು ಯಾರು ? ಬಂದ ಕಾರಣವೇನು ?"

ಆಗ ನನ್ನ ಕಥೆಯನ್ನೆಲ್ಲ ಮುದುಕನಿಗೆ ಹೇಳಿದೆನು. ಸೆರೆಮನೆ ಯಲ್ಲಿ ಬಿದ್ದ ' ಕನಸಿ ' ನ ವರ್ತಮಾನವನ್ನು ಕೇಳಿ, ಅವನಿಗೆ ಆಶ್ಚರ್ಯ ವಾಯಿತು. ಬಳಿಕ ವೃದ್ಧನು ನನ್ನನ್ನು ಮನೆಗೆ ಕರೆದೊಯ್ದನು. ನನ್ನ ಕನಸಿನಲ್ಲಿ ಕಂಡ ಕುಮಾರಿಯು, ಅಲ್ಲಿ ವಿಷಾದಮಯ ಗಾನಲಹರಿಯಲ್ಲಿ ತನ್ನ ಮನವನ್ನು ರಮಿಸಿಕೊಳ್ಳುತ್ತಿದ್ದಳು. ನಾವು ಬಂದೊಡನೆ ಸಾವ ಕಾಶವಾಗಿ ಎದ್ದು ಒಳಮನೆಯನ್ನು ಸೇರಿದಳು.

" ರುಕ್ಮಿಣಿ ಕುವರಿ ! ಇವರು ವಿಜಯ ಕುಮಾರರು. ಲಕ್ಷ್ಮೀ ದೇವಿಯವರ ಗುರುತಿನಿಂದ ಇಲ್ಲಿಗೆ ಬಂದಿದ್ದಾರೆ" ಎಂದು ಪ್ರೇಮ ಚಂದನು ಅವಳಿಗೆ ನನ್ನ ಪರಿಚಯವನ್ನು ಮಾಡಿಕೊಟ್ಟನು.

" ಕುಮಾರರಿಗೆ ಸ್ವಾಗತವಿರಲಿ. " ಮೃದುಸ್ಮಿತೆಯಾಗಿ ಲಕ್ಷ್ಮೀ ದೇವಿಯು ಮಾತನಾಡಿದಳು. ಅದೇ ಧ್ವನಿ, ಅದೇ ಗಾಂಭೀರ್ಯ, ಅದೇ ನಗೆ. ಲಕ್ಷ್ಮೀದೇವಿಯು ನನ್ನನ್ನು ತಿರಸ್ಕರಿಸಿಲ್ಲವೆಂದು ಮನಸ್ಸಿನಲ್ಲಿ ಸಮಾಧಾನ ಹೊಂದಿದೆನು.

" ಇವರು ಲಕ್ಷ್ಮೀದೇವಿಯವರ ಪುತ್ರಿ. ದೇಶಕಾರ್ಯದ ಸಲು ವಾಗಿಯೇ ಈ ಲತೆಯನ್ನು ದೇವಿಯವರು ಬೆಳೆಯಿಸಿದರು. ನಾನು ಅದನ್ನು ನೋಡಿಕೊಂಡು ಬಂದಿದ್ದೇನೆ. " ಗದ್ಗದಿತಕಂಠನಾಗಿ ಪ್ರೇಮಚಂದನು ಹೇಳಿದನು.

ನಾನು ಮೌನವಾಗಿ ರುಕ್ಮಿಣೀದೇವಿಯನ್ನು ನೋಡಿದೆನು. ಅವಳ ಅಗಲವಾದ ಕಣ್ಣೀರಿನಲ್ಲಿ ಆರ್ದ್ರಭಾವವು ಸುಳಿಯಿತು.

* * * *

ಮುಂದೆ ಕೆಲವು ದಿನಗಳಲ್ಲಿ ರುಕ್ಮಿಣಿಯ ಪ್ರೇಮವನ್ನು ನಾನು ಸಂಪಾದಿಸಿದುದನ್ನು ಬಿಚ್ಚಿ ಹೇಳಬೇಕೆ? ನನ್ನ ಕಥೆಯು ಅವಳಿಗೆ ಮನದಟ್ಟಾಗಿ ಹೋಗಿತ್ತು. ಅನುಭವಿಕನಾದ ಪ್ರೇಮಚಂದನೂ ನನ್ನ ಒಲುಮೆಗೆ ಸಂತೋಷದಿಂದ ಅನುಮತಿಯಿತ್ತನು.

೫

ನನ್ನ ಹಾಗು ರುಕ್ಮಿಣಿಯ ವಿವಾಹವು ಬಹು ವಿಜೃಂಭಣೆಯಿಂದ ಆ ಹಳ್ಳಿಯಲ್ಲಿ ನೆರವೇರಿತು. ಸತಿಪತಿಯರಾಗಿ ನಾವು ಅಲ್ಲಿ ಕೆಲವು ಕಾಲ ಕಳೆದೆವು. ಒಂದೆರಡು ವರ್ಷ ಗತಿಸಿದ ಮೇಲೆ ಪ್ರೇಮಚಂದನು ಕಾಲಾಧೀನನಾದನು. ಅವನ ಮರಣಕ್ಕಾಗಿ ಹಳ್ಳಿಯೆಲ್ಲ ಮರುಗಿತು. ಆದರೆ ತನ್ನ ಕಾರ್ಯವನ್ನು ಕೊನೆಗಾಣಿಸಿದ ಆ ಮುದುಕನು ನಗುತ್ತ ಸ್ವರ್ಗವನ್ನೈದಿದನು.

ಮುಂದೆ ನಮ್ಮ ಜೀವನದ ಗುರಿಯ ಬಗ್ಗೆ ನಾವು ಬಹಳವಾಗಿ ವಿಚಾರಿಸಿದೆವು. ಯಾವ ರೀತಿಯಾಗಿ ದೇಶಕಾರ್ಯವನ್ನು ಕೈಕೊಳ್ಳಬೇಕು? ದೇಶವೆಲ್ಲ ಮೌನವಾಗಿತ್ತು. ಆರ್ಯಾವರ್ತದ ರಾಜರೆಲ್ಲ ಮಾಂಡಲಿಕರಾಗಿ ಸುಖಲೋಲುಪರಾಗುತ್ತಿದ್ದರು. ಇನ್ನು ಭರತಖಂಡದ ಉಜ್ವಲತೆಯು ದೀರ್ಘನಿದ್ರಾಪರವಶವಾಯಿತೆಂದು ನನಗೆನಿಸಿತು. ಆದರೆ ವಿಧಿಲಿಖಿತವನ್ನು ಅಳಿಸುವದು ಹೇಗೆ! ಕತ್ತಲೆ–ಗಾಳಿಗಳೊಡನೆ ಹೋರಾಡುವದು, ಪೂರ್ತಿಯಿಲ್ಲದ ಕನಸು, ಅದರಿಂದ ಯಾವ ಗುರಿಯೂ ಸಾಧಿಸುವದಿಲ್ಲ. ಒಂದು ಧ್ಯೇಯವನ್ನು ಮಾತ್ರ ಬೆಳಗಿಸಬಹುದು. ಅಜ್ಞಾನಿಗಳಾದ ಭಾರತೀಯರನ್ನು ಜ್ಞಾನವಂತರನ್ನಾಗಿ ಮಾಡಿದರೆ ದೇಶದ ಪುಣ್ಯವು ತೆರೆಯಬಹುದಲ್ಲವೆ? ಉತ್ಸಾಹಿಗಳಾದ ತರುಣರನ್ನು ಕಲೆಹಾಕಿ, ಆರ್ಯಾವರ್ತದ ಘನತೆಯನ್ನು ಅವರಿಗೆ ತಿಳಿಸಬೇಕು. ಸ್ವಾತಂತ್ರ್ಯದ ದೈವಿಕತೆಯನ್ನು ಅವರಿಗೆ ಬಣ್ಣಿಸಿ ಬಿಂಬಿಸುವಂತೆ ಮಾಡಬೇಕು.

ಅಂದರೆ ಇಂತಹ ಪುಣ್ಯಭೂಮಿಯ ದುರವಸ್ಥೆಯು ಅವರ ಮನವನ್ನು ದಹಿಸಬಹುದು. ಸ್ವಾತಂತ್ರ್ಯದ ಈ ಸಂದೇಶವು ದೇಶದಲ್ಲೆಲ್ಲ ಮಾಸ್ಲೋವಾಗಿ, ನವೋನವವಾದ ಪ್ರತಿಭೆಯು ಸಂಚಾರವಾಗಬಹುದಲ್ಲವೆ? ಇವೇ ಮೊದಲಾದ ವಿಚಾರಗಳು ನನ್ನ ಮನದಲ್ಲಿ ಅಂಕುರಿಸಿ, ಬೆಳೆದು ಫಲವಾಗಿ, ಕಡೆಗೆ ನಾನೂ ರುಕ್ಮಿಣಿಯೂ ಇಂತಹದೊಂದು ಆಶ್ರಮವನ್ನು ಸ್ಥಾಪಿಸಲು ಅಬೂಪಹಾಡದ ಒಂದು ಜನಾಂತಿಕವಾದ ಪ್ರದೇಶದೆಡೆಗೆ ತೆರಳಿದೆವು. ನಮ್ಮ ಧ್ಯೇಯಗಳನ್ನು ತಿಳಿದ ಅನೇಕ ದೇಶವತ್ಸಲರು ತಮ್ಮ ಬಾಲಬಾಲಿಕೆಯರನ್ನು ಆಶ್ರಮದಲ್ಲಿ ತಂದಿರಿಸಿ ಹೋದರು.

* * * * *

ಇಂದಿಗೆ **ಲಕ್ಷ್ಮೀಶಿಬಿರಕ್ಕೆ** ೨೦ ವರ್ಷಗಳು ತುಂಬಿವೆ. ಈ ಅವಧಿಯಲ್ಲಿ ನಾವು ಗುರಿಯಿಟ್ಟು ಹೊರಟ ತಾಣವು ಸುಳ್ಳಲ್ಲವೆಂದು ನನ್ನ ಕಲ್ಪನೆಯಾಗಿದೆ. ಮಹಾರಾಷ್ಟ್ರ, ಕರ್ನಾಟಕ ಮೊದಲಾದ ಪ್ರಾಂತಗಳಿಂದ ಬಂದ ಗೋಸಾವಿಗಳು ನಮ್ಮ ಶಿಬಿರದಲ್ಲಿ ನಿಂತು ತಮ್ಮ ಪ್ರಾಂತಗಳಿಗೆ ಮರಳಿ ಹೋದಾಗ ಇದೇ ಸಂದೇಶವನ್ನು ಬೀರುತ್ತಲಿದ್ದಾರೆ. ಭಾಗ್ಯೋದಯದ ಚಿಹ್ನಗಳು ಕಾಣುತ್ತಿವೆ. ವ್ಯಕ್ತಿಯು ಸ್ವತಃ ತಾನು ಏನು ಮಾಡಬಹುದು? ವಿಮೋಚನೆಯ ಪರಮ ಸುಖವನ್ನು ಕೊಡುವದು ದೇವ ದೇವನನ್ನೇ ಕೂಡಿದೆ. ಆದರೂ ನಾನು ಪ್ರಾರಂಭಿಸಿದ ಕಾರ್ಯವು ಮುಂದುವರಿಯುವದನ್ನು ನೋಡಿ ನನಗೆಷ್ಟೋ ಸಮಾಧಾನ.

ಇನ್ನೊಂದು ಮಾತನ್ನು ಇಲ್ಲಿ ವಿವರಿಸಲು ಮರೆಯಲಾರೆ. ನನ್ನ ಪ್ರೈವೆತ್ತ ಸ್ಫೂರ್ತಿಯಂತಿದ್ದ ರುಕ್ಮಿಣೀದೇವಿಯು ಇಂದಿಗೆ ಗತಿಸಿ ೫ ವರ್ಷಗಳಾದವು. ಇವರು ಸುತರನ್ನು ನನ್ನೊಡನೆ ಬಿಟ್ಟು ತೆರಳಿದ್ದಾಳೆ. ನನ್ನ ಸುತರೂ ಆಶ್ರಮನಿವಾಸಿಗಳೂ ನೆನೆಯಲೆಂದು ಈ ಐತಿಹ್ಯವನ್ನು ಇಲ್ಲಿ ಬರೆದಿಟ್ಟಿದ್ದೇನೆ. ರುಕ್ಮಿಣೀದೇವಿಯ ವಿಷಯವನ್ನೂ ಅವರು ಮರೆಯದಿರಲಿ. ಲಕ್ಷ್ಮೀದೇವಿಯಲ್ಲಿ ದಿವ್ಯವಾಗಿ ಪ್ರಜ್ವಲಿಸಿದ ಸಾಹಸವು, ರುಕ್ಮಿಣಿಯಲ್ಲಿ ಪ್ರಶಾಂತವಾಗಿ ಬೆಳಗಿತು. ಇವರಿಂದ ಧನ್ಯನಾದ ನಾನು, ಜನತೆಯೂ ಹಾಗೆ ಧನ್ಯತೆಯನ್ನು ಪಡೆಯುವದೆಂದು ನಂಬಿ

ದ್ದೇನೆ. ದೇಶದ ದೈವವು ಬೇಗ ತೆರೆಯಲಿ; ಇರುವನಕ ನನ್ನ ಕಾರ್ಯವು ಕದಲದಿರಲಿ,—ಹೀಗೆಂದು ದಿನಾಲು ನಾನು ದೇವದೇವನಿಗೆ ಪ್ರಾರ್ಥಿಸುತ್ತೇನೆ. ಇಷ್ಟು ಬಿನ್ನಹಗಳನ್ನು ಪೂರೈಸಿದ ಪರಮೇಶನು ಈ ಪ್ರಾರ್ಥನೆಯನ್ನು ಮನ್ನಿಸದಿರನೆ?''

———

## ಡೂಗಜ್ಜನ ಬಹಿಷ್ಕಾರ

ಅವರ ನಿಜವಾದ ಹೆಸರು ಡೂಗಜ್ಜ—ಎಂದಲ್ಲ. ಭೀಮಸೇನಾಚಾರ್ಯರು. ಆದರೆ ನಮ್ಮೂರವರೆಲ್ಲರೂ ಕರೆಯುವದು ಡೂಗಜ್ಜನೆಂದೇ. ಅವರಿಗೂ ಸಿಟ್ಟಿಲ್ಲ ಹಾಗೆ ಕರೆದರೆ. ಅವರು ಈ ಹೊಸ ಹೆಸರನ್ನು ಗಳಿಸಿ ಎರಡು ಪಟ್ಟದ ಮೇಲಾಗಿರಬಹುದೆಂದು ನನ್ನ ತಿಳಿವಳಿಕೆ. ಡೂಗಜ್ಜನನ್ನು ಯಾರಾದರೂ ಕಾಣಬೇಕಾದರೆ, ನಮ್ಮೂರ ನಾರಾಯಣ ದೇವರ ಗುಡಿಯಲ್ಲಿಯ ನೃಸಿಂಹತೀರ್ಥದ ಪಾವಟಿಗೆಯ ಮೇಲೆ; ಇಲ್ಲವೆ ಸಭಾಮಂಟಪದೆದುರಿಗಿದ್ದ ಗರುಡದೇವರ ಗುಡಿಯಲ್ಲಿ. ಈ ಎರಡು ಸ್ಥಳಗಳನ್ನು ಬಿಟ್ಟು ಅವರೆಂದೂ ಬೇರೆಕಡೆಗೆ ಇರುತ್ತಿದ್ದಿಲ್ಲ. ಅಗ್ರಹಾರದ ಹುಡುಗರಿಗೆಲ್ಲ ಡೂಗಜ್ಜನೆಂದರೆ ಬೆಲ್ಲದಚ್ಚು. ನಮ್ಮೂರ ಗೋಕುಲಾಷ್ಟಮಿ, ನವರಾತ್ರಿ ಬಹಳ ಪ್ರಸಿದ್ಧ. ಇವು ಬಂದವೆಂದರೆ, ಅಗ್ರಹಾರದ ಹುಡುಗರನ್ನು ಹಿಡಿಪವರೇ ಇಲ್ಲ. ತೆರೆಗಳಂತೆ–ಈ ಹುಡುಗರ ತಂಡಗಳು ಗುಡಿಯಲ್ಲಿ ಆನಂದದಿಂದ ಅಲೆದಾಡುತ್ತಿರುವದನ್ನು ನೋಡಿದರೆ, ಯಾವನಿಗೆ ತನ್ನ ಬಾಲ್ಯದ ನೆನಪಾಗಿ ಮೈ ಜುಮ್ಮೆಂದು ಕರುಳು ಕುಣಿದಾಡಲಿಕ್ಕಿಲ್ಲ!

ಗೋಕುಲಾಷ್ಟಮಿಯ ದಿನ ರಾತ್ರಿ ಹನ್ನೆರಡು ಗಂಟೆಗೆ ಕೀರ್ತನ. ಮರುದಿನ ಮುಂಜಾನೆ ಗೋಪಾಲಕಾವಲಿ. ಅಲ್ಲಿಂದ ಊರ ಬ್ರಾಹ್ಮಣರಿಗೆಲ್ಲ ಊಟ. ಯಾರ ಮನೆಯಲ್ಲಿಯೂ ಅಡಿಗೆ ಇಲ್ಲ. ಎಲ್ಲರೂ ಗುಡಿಗೆ ಊಟಕ್ಕೆ ಬರುವವರೇ. ಆದರೆ ನಮ್ಮ ಡೂಗಜ್ಜನು ಮಾತ್ರ ಬೇಗನೆ ತನ್ನ ಊಟ ತೀರಿಸಿಕೊಂಡು, ನೃಸಿಂಹದೇವರ ಪಾವಟಿಗೆಯ ಮೇಲೆ ಎಂದಿನಂತೆ ಕುಳಿತಿರುತ್ತಿದ್ದನು. ನವರಾತ್ರಿಯಲ್ಲಿಯೂ ಹೀಗೇ. ಯಾರು

ಬಂದರೂ ಡೂಗಜ್ಜನು ಮಾತ್ರ ಗುಡಿಗೆ ಊಟಕ್ಕೆ ಬರುತ್ತಿರಲಿಲ್ಲ. ನಮಗೆ ಇದರ ಅರ್ಥವೇ ಆಗಿದ್ದಿಲ್ಲ. ನಾವಾಗ ಇನ್ನೂ ಚಿಕ್ಕವರು. ಏನೂ ತಿಳಿಯುತ್ತಿರಲಿಲ್ಲ. ಒಂದು ದಿನ ಮಧ್ಯಾಹ್ನ ಡೂಗಜ್ಜನು ಗರುಡ ದೇವರ ಗುಡಿಯಲ್ಲಿ, ಧೋತರವನ್ನು ತುಂಬ ಹೊದ್ದುಕೊಂಡು ಕುಳಿತಿದ್ದನು. ನಾವು 'ಚಿಣಿ ಫಣಿ' ಆಟವಾಡಲಿಕ್ಕೆ—ಅಂದು ಆದಿತ್ಯವಾರವಾದ್ದರಿಂದ—ಗುಡಿಗೆ ಹೋದೆವು. ಡೂಗಜ್ಜನನ್ನು ನೋಡಿ ಆಟವನ್ನು ಬಿಟ್ಟುಕೊಟ್ಟು, ಅವನ ಹತ್ತಿರ ಎಲ್ಲರೂ ಬಂದು ಕುಳಿತು, ಕತೆ ಹೇಳೆಂದು ಒತ್ತಾಯಪಡಿಸಿದೆವು. ಡೂಗಜ್ಜನು ಒಂದು ಕತೆ ಹೇಳಿ ಮುಗಿಸುವಷ್ಟರಲ್ಲಿ ನಾನು ಕೇಳಿದೆ:- 'ಡೂಗಜ್ಜ—ನೀನು ಗುಡಿಗೆ ಊಟಕ್ಕೇಕೆ ಬರುವದಿಲ್ಲ?' ಎಂದು.

ಡೂಗಜ್ಜನು ಒಂದು ದೀರ್ಘವಾದ ನಿಟ್ಟುಸಿರನ್ನು ಹಾಕಿ, ಕೆಳದನಿಯಲ್ಲಿಯೇ ಉತ್ತರಕೊಟ್ಟನು "ನನಗೆ ಶ್ರೀಗಳವರಿಂದ ಬಹಿಷ್ಕಾರವಿದೆ."

ನನಗೆ ಇದರರ್ಥವು ತಿಳಿಯಲಿಲ್ಲ. ಮತ್ತೆ ಕೇಳಿದೆ: "ಬಹಿಷ್ಕಾರ ಅಂದರೆ?"

ಡೂಗಜ್ಜನ ಒಳಸೇರಿದ ಕಣ್ಣುಗಳು ನೀರುತುಂಬಿದುದರಿಂದ ಹೊಳೆಯತೊಡಗಿದವು. ಮೆಲ್ಲನೆ,ಏನೋ ನೆವಮಾಡಿ ಕಣ್ಣುಗಳನ್ನು ಒರಸಿಕೊಂಡು, ಉಸಿರನ್ನು ಮೇಲಕ್ಕೆಳೆದುಕೊಂಡು, "ಮಗೂ—ಏನೆಂದು ಹೇಳಲಿ? ನಾನು ಪಾಪಿ! ನನ್ನ ಪಾಪದ ಸೋಂಕು ಉಳಿದವರಿಗೆ ತಟ್ಟಬಾರದೆಂದು ಶ್ರೀಗಳವರು ನನ್ನನ್ನು ಸಮಾಜದಿಂದ ಹೊರಗಿಟ್ಟಿದ್ದಾರೆ. ಇದೇ ಬಹಿಷ್ಕಾರ........" ಎಂದು ಉತ್ತರಕೊಟ್ಟು ಮೇಲಕ್ಕೆಳೆದುಕೊಂಡಿದ್ದ ಉಸಿರನ್ನು ಹೊರಕ್ಕೆ ಹಾಕಿದನು.

ನನ್ನ ಕುತೂಹಲವು ಅವರ ನಿಟ್ಟುಸಿರುಗಳಿಂದ ಹೆಚ್ಚಾಗುತ್ತಾ ನಡೆಯಿತು. 'ಏನೋ ಇದೆ. ಕೇಳಬೇಕು' ಎಂಬ ಆಶೆಯು ಬಲಿಯುತ್ತಾ ಬಂದಿತು ಕೊನೆಗೆ ಕೇಳಿಯೇ ಬಿಟ್ಟೆ. "ಅದು ಯಾವ ಪಾಪ, ಡೂಗಜ್ಜ—ನೀನು ಮಾಡಿದ್ದು?"

ಡೂಗಜ್ಜನು ಕಣ್ಣುಗಳನ್ನು ತಿಕ್ಕುತ್ತಾ ಬೇಸರದ ದನಿಯಲ್ಲಿ "ಅಪ್ಪಾ, ನನ್ನ ಪಾಪದ ಕತೆ ದೊಡ್ಡದಿದೆ. ಅದರಿಂದೇನು ಪ್ರಯೋಜನ?

ಹೇಳಬೇಕೆಂದರೆ ಹೇಳುತ್ತೇನೆ, —ನಿರ್ವಾಹವಿಲ್ಲ" ಎಂದು ನಮ್ಮ ಶುದ್ಧ–ಮುಗ್ಧ ಕುತೂಹಲಕ್ಕೆ ಮರುಳಾಗಿ ಉತ್ತರಕೊಟ್ಟನು. ಎಲ್ಲ ಹುಡುಗರೂ ಒಂದೇ ದನಿಯಲ್ಲಿ 'ಹೇಳು—ಹೇಳು—' ಎಂದು ಕೂಗಿದರು.

ಹೊದ್ದಿದ್ದ ಧೋತರವನ್ನು ತೆಗೆದು ಟೊಂಕಕ್ಕೆ ಸುತ್ತಿ, ದೂಗಜ್ಜ ನು ಪ್ರಾರಂಭಮಾಡಿದನು.

"ರಕ್ತಾಕ್ಷಿ ಸಂವತ್ಸರದ ಜ್ಯೇಷ್ಠ ಶುದ್ಧ ಪಂಚಮಿಯ ದಿವಸ ನಮ್ಮೂರ ಮಾಮ್ಲೇದಾರರ ತಾಯಿಯ ಶ್ರಾದ್ಧವನ್ನು ತೀರಿಸಿಕೊಂಡು, ರಾಯರ ಕೂಡ ಸ್ವಲ್ಪ ಹರಟೆಯನ್ನು ಹೊಡೆದು, ಮನೆಗೆ ತಿರುಗಿ ಬರಬೇಕಾದರೆ ರಾತ್ರಿಯಾಯಿತು. ಆಹ್ನಿಕವನ್ನು ತೀರಿಸಿಕೊಂಡು ಮಲಗಬೇಕಾದರೆ ಐದು ತಾಸು ರಾತ್ರಿಗೆ ಬಂತು. ಹಾಸಿಗೆಯ ಮೇಲೆ ಒರಗಿಕೊಂಡಿದ್ದೆ ಮಾತ್ರ; ಇನ್ನೂ ನಿದ್ರೆ ಹತ್ತಿರಲಿಲ್ಲ. ಆಗ 'ಆಚಾರರS ಆಚಾರರSS' ಎಂದು ಹೊರಗೆ ಯಾರೋ ಕರೆದಂತಾಯಿತು. ಏಳಲಾರದೆ ಮಲಗಿದಲ್ಲಿಂದಲೇ "ಯಾರವರು? ಏನು ಕೆಲಸ?" ಎಂದು ಕೇಳಿದೆ. 'ನಾನ್ರಿ, ಬಸಪ್ಪ, ಮಾಮ್ಲೇದಾರ ಮನೀ ಆಳು. ಮಾಮ್ಲೇದಾರ್ ಸಾಹೇಬರು ನಿಮ್ಮನ್ನ ಈಗS ಕರಕೊಂಡು ಬಾ ಅಂತ ಹೇಳ್ಯಾರ್ರಿ.' ಎಂದು ಮಾಮ್ಲೇದಾರ ಮನೆಯ ಆಳು ಉತ್ತರಕೊಟ್ಟ. ಬಳಿಕ ಹೊಟ್ಟೆ ಭಾರವಾದದ್ದರಿಂದ ಸಾವಕಾಶವಾಗಿ ಹಾಸಿಗೆಯಿಂದ ಮೇಲಕ್ಕೆದ್ದು, ತಲೆಬಾಗಿಲಿಗೆ ಬಂದು ಮುಟ್ಟುತ್ತಿರುವಾಗಲೆ "ಯಾತಕ್ಕೋ ಬಸಪ್ಪಾ?" ಎಂದು ಮತ್ತೊಂದು ಪ್ರಶ್ನೆ ಮಾಡಿದೆ. ಅದಕ್ಕೆ "ಯಾತಕೋ ಏನೋ ಗೊತ್ತಿಲ್ರಿ. ಗಡಾ ಕರಕೊಂಡು ಬಾ ಅಂತ ಈಟS ಹೇಳ್ಯಾರ್ರಿ.' ಎಂದು ಉತ್ತರಕೊಟ್ಟ. 'ಏತಕ್ಕಿರಬಹುದು? ನಿನ್ನೆ ಇನ್ನೂ ಶ್ರಾದ್ಧವಾಗಿದೆ. ಮತ್ತೇನಿರಬಹುದು? ದೊಡ್ಡವರ ಕೆಲಸ" ಎಂದು ಮನಸಿನಲ್ಲಿ ಗೊಣಗುಟ್ಟುತ್ತ ಬಾಗಿಲು ತೆರೆದು, ಧೋತರವೊಂದನ್ನು ಹೊದ್ದುಕೊಂಡು, ಬಸಪ್ಪನ ಕೂಡ ಹೊರಟೆ. ಮನೆಯಲ್ಲಿ ಮಗಳೊಬ್ಬಳೆ. ಇನ್ನೂ ಲಗ್ನವಾಗಿರಲಿಲ್ಲ. ನನ್ನ ಹೆಂಡತಿ ಸತ್ತು ಎರಡು ವರ್ಷಗಳ ಮೇಲಾಗಿತ್ತು. ಮಗಳಿಗೆ 'ಗಟ್ಟಿಯಾಗಿ ಬಾಗಿಲು ಹಾಕಿಕೊಂಡು

ಮಲಗು, ಜೋಕೆ. ಈಗ ಬರುತ್ತೇನೆ.' ಎಂದು ಎಚ್ಚರಿಕೆಯ ಪರಾಕನ್ನು ತಿರುತಿರುಗಿ ಹೇಳಿ ಮುಂದೆ ಸಾಗಿದೆ. ಬಸಪ್ಪ ಮುಂದೆ ಮುಂದೆ; ನಾನು ಅವನ ಹಿಂದೆ ಹಿಂದೆ. ಮಾಮ್ಲೇದಾರರ ಮನೆ ಮುಟ್ಟುವದಕ್ಕೆ ಸರಿಯಾಗಿ, ಮಾಮ್ಲೇದಾರರೇ ಅಂಗಿ ರುಮಾಲು ಹಾಕಿಕೊಂಡು ಹೊರ ಅಂಗಳದಲ್ಲಿ ಬಂದು ನಿಂತಿದ್ದರು. ನನ್ನನ್ನು ನೋಡಿದೊಡನೆ "ಓಹೋ, ಬಂದಿರಾ? ಬರ್ರಿ ಹೋಗೋಣ. ಬಸಪ್ಪಾ, ಕಂದೀಲು ತೆಗೆದುಕೊಂಡು ಮುಂದೆ ನಡೆ" ಎಂದು, ಬಸಪ್ಪನು ಬರುವದರೊಳಗಾಗಿ ಅಂಗಳವನ್ನು ದಾಟಿ ಬೀದಿಗೆ ಬಂದರು. ಆಗ ಸುಮಾರು ಒಂಬೂವರೆ–ಎರಡು ಗಂಟೆ ರಾತ್ರಿಯಾಗಿರಬಹುದು. ಮಂದವಾದ ಬೆಳದಿಂಗಳು ಬಿದ್ದಿತ್ತು. ದಾರಿ ಕಾಣದಷ್ಟು ಕತ್ತಲೇನು ಇದ್ದಿಲ್ಲ. ಆದರೆ ಮಾಮ್ಲೇದಾರರಿಗೆ ಮಾತ್ರ ಅಷ್ಟು ಬೆಳಕು ಸಾಲದು. ಅಂತಲೇ ಬಸಪ್ಪನಿಗೆ ಕಂದೀಲು ತರಹೇಳಿದರು. ಬಸಪ್ಪನು ಓಡುತ್ತಾ ಹೋಗಿ ಕಂದೀಲು ತೆಗೆದುಕೊಂಡು ಬಂದು ನಮ್ಮನ್ನು ಕೂಡಿದನು. ಆಹೊತ್ತು ಮಾಮ್ಲೇದಾರರು ನನ್ನಕೂಡ ವಿಶೇಷ ಮಾತಾಡಲೇ ಇಲ್ಲ. ಗಂಭೀರರಾಗಿ ಮುಂದೆ ಸಾಗಿದ್ದರು. ನನಗೆ ಯಾವುದಕ್ಕೂ ಧೈರ್ಯವಿದ್ದಿಲ್ಲ. 'ಎಲ್ಲಿಗೆ?' ಎಂದು ಕೇಳಿದರೆ ಅಪಶಕುನವಾಗಬಹುದೆಂದು, ಬಾಯ ತುದಿಯವರೆಗೆ ಬಂದಿದ್ದ ಆ ಪ್ರಶ್ನೆಯನ್ನು ಅದೆಷ್ಟೋ ಸಾಹಸದಿಂದ ಹತ್ತಿಕ್ಕಿ, ಪಿಟ್ಟೆಂದು ಮಾತಾಡದೆ, ಅವರ ಹಿಂದಿನಿಂದ ಸಾಗಿದ್ದೆ. ಆದರೆ ತಲೆಯಲ್ಲಿ 'ಎಲ್ಲಿಗೆ? ಏತಕ್ಕೆ?'–ಈ ಎರಡು ಪ್ರಶ್ನೆಗಳು ಮಾತ್ರ ತಿರುಗುತ್ತಲೇ ಇದ್ದವು. ಇಪ್ಪತ್ತು ನಿಮಿಷದ ಹಾದಿಯನ್ನು ನಡೆದ ಮೇಲೆ, ಊರ ಹೊರಗಿನ ಒಂದು ಭವ್ಯವಾದ ಬಂಗ್ಲೆಯ ಎದುರಿಗೆ ಬಂದು ನಿಂತೆವು. ನಮ್ಮೂರಿಗೆ ಯಾವ ಸಾಹೇಬರೇ ಬರಲಿ, ಅವರು ಇಳಿದುಕೊಳ್ಳುವದು ಇದೇ ಬಂಗ್ಲೆಯಲ್ಲಿ. ಸಾಹೇಬರಿಗೆ ಅನುಕೂಲವಾಗುವಂತಹ ಎಲ್ಲ ವ್ಯವಸ್ಥೆಯೂ ಅಲ್ಲಿ ಇರುವದು. ತಂತಿಯ ದೀಪಗಳು ಕೂಡ ಬಂದು ಒಂದು ವರ್ಷದ ಮೇಲಾಯಿತು. ಇಷ್ಟು ದಿನಗಳ ವರೆಗೆ ನಾನು ಆ ಬಂಗ್ಲೆಯನ್ನು ದೂರದಿಂದಲೇ ನೋಡಿದ್ದೆ. ಒಳಗೆ ಹೋಗಿ ನೋಡಿರಲಿಲ್ಲ. ಇಂದು ಮಾಮ್ಲೇದಾರರ ಪುಣ್ಯಯೋಗದಿಂದ ಎಲ್ಲವೂ ನೋಡಲಿಕ್ಕೆ ಸಿಕ್ಕಿತು.

ರಾತ್ರಿಯ ಸಮಯ. ಚಂದ್ರನು ಅದೇ ಮುಳುಗುವದರಲ್ಲಿದ್ದಾನೆ. ಕತ್ತಲು ಕವಿಯುತ್ತಿದೆ. ಊರು ಬಿಟ್ಟು ಒಂದು ಮೈಲು ದೂರದಲ್ಲಿ ಯಾರ ನೆರವಿಲ್ಲದಲ್ಲಿ, ಒಂಟಿಯಾಗಿ ಈ ಬಂಗ್ಲೆಯು ನಿಂತುಕೊಂಡಿದೆ. ಒಳಗೆಲ್ಲ ತಂತಿಯ ದೀಪಗಳು ಒಂದೇ ಸಮನೆ ಉರಿಯುತ್ತಿವೆ. ನಿಶ್ಯಬ್ದ! ಹೊರಗೆ ಐದಾರು ಜನರು ಓಡಾಡುತ್ತಿದ್ದರೂ, ಸಿನೇಮಾದಲ್ಲಿಯ ಮೂಕ ಗೊಂಬೆಗಳಂತೆ ಒಬ್ಬರನ್ನೊಬ್ಬರು ಪಿಳಿಪಿಳಿ ನೋಡುತ್ತಾ, ಮಾತನಾಡಿಸದೆ ಹಾಗೇ ತಿರುಗಾಡುತ್ತಿದ್ದುದರಿಂದ, ಅಲ್ಲಿಯ ನಿಶ್ಯಬ್ದತೆಯ ಗಂಭೀರಭಾವವು ಮತ್ತಿಷ್ಟು ಹೆಚ್ಚುತ್ತಿದ್ದಿತು ಇದನ್ನೆಲ್ಲ ನೋಡಿ ನನಗೆ ಭಯವಾಯಿತು. ಮೈ ಜುಮ್ಮೆಂದಿತು. ಒಳಗಿನ ಜೀವ 'ಅಯ್ಯೋ' ಎಂದು ನಡುಗಿತು. 'ಮಾಮ್ಲೇದಾರರು ನನ್ನನ್ನೇಕೆ ಇಲ್ಲಿಗೆ ಈಗ ಕರೆದುಕೊಂಡು ಬಂದರು?' ಇದನ್ನು ಕೇಳಿ ಬಿಡಬೇಕೆಂದರೆ ಏನೆನ್ನುವರೋ ಎಂಬ ಭಯ. ಕೇಳದೆ ಬಿಟ್ಟರೆ ಒಳಗಿನ ದುಗುಡ ಕಡಿಮೆಯಾಗಲೊಲ್ಲದು. ನನ್ನ ಬುದ್ಧಿಗೆ ಯಾವುದೂ ತೋಚಲಿಲ್ಲ. ಸುಮ್ಮನೆ ರಾಯರ ಬೆನ್ನು ಹಿಡಿದು ಸಾಗಿದೆ. ಮೊದಲು ಒಂದು ಚಿಕ್ಕ 'ಗೇಟು.' ಅದರೊಳಗಿಂದ ಹಾಯ್ದು ಮುಂದೆ ಹೋದರೆ ಒಂದು ಕಲ್ಲಿನ ಮಂಟಪ. ಬಂಗ್ಲೆಯೊಳಕ್ಕೆ ಹೋಗಬೇಕಾದರೆ ಈ ಕಲ್ಲಿನ ಮಂಟಪದೊಳಗಿಂದ ಹಾಯ್ದು ಹೋಗಲೇ ಬೇಕು. ಈ ಮಂಟಪದಲ್ಲಿ ನಾಲ್ಕೈದು ಜನರು ನಿಂತುಕೊಂಡಿದ್ದರು. ನಮ್ಮನ್ನು ನೋಡಿದೊಡನೆ—ಆದರದಿಂದ—ಅವರೊಳಗಿನವನೊಬ್ಬನು ಮುಂದೆ ಬಂದು 'ಸಲಾಂ' ಹೊಡೆದು, ಹೀಗೆ ಬರಬೇಕೆಂದು ಕೈತೋರಿಸಿದನು. ಅವನು ತೋರಿಸಿದ ದಿಕ್ಕು ಹಿಡಿದು ರಾಯರು ಮುಂದೆ ನಡೆದರು. ಅವರ ಹಿಂದೆ ಹಿಂದೆ ನಾನು ನಡೆದೆನು. ಎಡಕ್ಕಿರುವ ಕೊಠಡಿಯೊಳಗಿಂದ ಹಾಯ್ದು, ಒಳಬಾಗಿಲಿನಿಂದಲೇ ಮೊಗಸಾಲೆಯನ್ನು ಪ್ರವೇಶಿಸಿದೆವು. ಬಿಳಿಯ ಸುಣ್ಣ ಹಚ್ಚಿದ ಎತ್ತರವಾದ ಗೋಡೆಗಳು. ಕಬ್ಬಿಣದ ಕಂಬಿಗಳ ತೊಲೆಯ ಮೇಲೆ, ಶಾಬಾದವಾಡಿಯ ಕಲ್ಲುಗಳನ್ನು ಜೋಡಿಸಿ, ಅವಕ್ಕೂ ಸುಣ್ಣವನ್ನು ಹಚ್ಚಿದ್ದರು. ಕಿಟಕಿಗಳ ಬಾಗಿಲುಗಳಿಗೂ, ಅವುಗಳ ಕಬ್ಬಿಣದ ಬಾರುಗಳಿಗೂ ಕೂಡಿಯೇ ಬಿಳಿಯ ವಾರ್ನೀಸು ಬಳಿಯಿಸಿದ್ದರು. ಮಧ್ಯದಲ್ಲಿ ಒಂದು ದೊಡ್ಡ ತಂತಿಯ ದೀಪವು ನೇತಾಡುತ್ತಿದ್ದಿತು. ಅದೂ

ಬಿಳಿಯದೇ. ಅಲ್ಲಿಯೆ ಒಂದು ಮೂಲೆಯಲ್ಲಿ ಬುರುಕೆಯನ್ನು ಹಾಕಿಕೊಂಡು ಕುಳಿತ ಪಲ್ಲಂಗವು ಕೂಡ ಬಿಳಿಯದೇ. ಆ ಪಲ್ಲಂಗದ ಬಳಿಯಲ್ಲಿ ನಿಂತಿದ್ದ ವ್ಯಕ್ತಿಯು ಕೂಡ ಆಪಾದಮಸ್ತಕ ಬಿಳಿಯುಡುಪನ್ನೇ ಧರಿಸಿದ್ದನು. ಎತ್ತ ನೋಡಿದರೂ ಬೆಳ್ಳಗೆ. ಈ ಬಿಳಿ ಬೆಳಕಿಗಾಗಿ ನನ್ನ ತಲೆ ಚಿಟ್ಟು ಹಿಡಿದು ಹೋಯಿತು. ನಮ್ಮನ್ನು ಕರೆದು ತಂದಿದ್ದ ಆಳು, ನಾವು ಮೊಗಸಾಲೆಯನ್ನು ಪ್ರವೇಶಿಸಿದೊಡನೆಯೆ ಹೊರಟುಹೋದನು. ಅಲ್ಲಿ ಮೊದಲು ಆ ಬಿಳಿಯುಡುಪಿನ ವ್ಯಕ್ತಿಯೊಂದನ್ನು ಬಿಟ್ಟು ನನಗೆ ಯಾರೂ ಕಾಣಲಿಲ್ಲ. ಸುತ್ತೆಲ್ಲ ನೋಡಿದೆ. ಏನೂ ತಿಳಿಯಲಿಲ್ಲ. ಮಾನ್ಲೇದಾರರು ಮುಂದೆ ಹೋಗಿ, ತಮಗಾಗಿರಿಸಿದ್ದ ಕುರ್ಚಿಯ ಮೇಲೆ ಕುಳಿತುಕೊಂಡು, ತಮ್ಮ ಮಗ್ಗುಲಲ್ಲಿದ್ದ ಕುರ್ಚಿಯ ಮೇಲೆ ಕುಳಿತುಕೊಳ್ಳಲು ನನಗೆ ಸನ್ನೆ ಮಾಡಿದರು. ಅಲ್ಲಿಂದ ನಾನು ಹೋಗಿ, ಅವರ ಹತ್ತಿರ ಅಂಜುತ್ತಂಜುತ್ತ ಕುಳಿತುಕೊಂಡೆ. ಒಂದು ಕ್ಷಣಕಾಲ ಗತಿಸಿತು. ಬಳಿಕ ಬಿಳಿಯುಡುಪಿನ ವ್ಯಕ್ತಿಯು ಪಲ್ಲಂಗದ ಬುರುಕೆಯನ್ನು ನಸುವೆ ಸರಿಸಿದನು. ಪಲ್ಲಂಗದ ಮೇಲೆ ಸಾಹೇಬರ ಉಡುಪಿನಲ್ಲಿ ಒಂದು ವ್ಯಕ್ತಿಯು ಮಲಗಿ, ಅರೆಗಣ್ಣು ಮುಚ್ಚಿದುದನ್ನು ಅಸ್ಪಷ್ಟವಾಗಿ ಕಂಡೆನು ಬಿಳಿಯುಡುಪಿನ ವ್ಯಕ್ತಿಯು ಬುರುಕೆಯೊಳಕ್ಕೆ ತನ್ನ ಗೋಣು ಚಾಚಿ, ಮಲಗಿದ ವ್ಯಕ್ತಿಯ ಕಿವಿಯಲ್ಲಿ ಏನನ್ನೋ ಹೇಳಿ, ಮತ್ತೆ ಮೊದಲಿನಂತೆ ಸ್ತಬ್ಧವಾಗಿ ನಿಂತುಕೊಂಡನು. ಇನ್ನೊ ಒಂದು ಕ್ಷಣ ಓಡಿತು. ಮಲಗಿದ ವ್ಯಕ್ತಿಯು ಮೆಲ್ಲನೆ ಪಲ್ಲಂಗದ ಬುರಿಕೆಯನ್ನು ತನ್ನ ಎಡಗೈಯಿಂದ ಸರಿಸಿ, ನಮ್ಮನ್ನು ದಿಟ್ಟಿಸಿ ನೋಡಿ, ದಗ್ಗನೆ ಎದ್ದು ಪಲ್ಲಂಗದಿಂದ ಕೆಳಕ್ಕೆ ಹಾರಿ ಬಂದು ನನ್ನ ಪಾದಗಳನ್ನು ಗಟ್ಟಿಯಾಗಿ ಹಿಡಿದನು. ಇದನ್ನೆಲ್ಲ ನೋಡಿ ಮೊದಲಿನಿಂದಲೂ ಗಾಬರಿಗೊಂಡಿದ್ದ ನನ್ನ ಅವಸ್ಥೆಯನ್ನು ಏನು ಹೇಳಲಿ! ಕೈಕಾಲುಗಳು ಥರಗುಟ್ಟಿ ನಡಗುತ್ತಿದ್ದವು. ಮೈಯೆಲ್ಲಾ ಬೆವರೊಡೆಯಿತು. ನಾಲಗೆ ಒಣಗಿ ಹೋಯಿತು. ಮಾತೇ ಹೊರಡಲಿಲ್ಲ. ಒಮ್ಮೆ ರಾಯರ ಕಡೆಗೆ, ಮತ್ತೊಮ್ಮೆ ಕಾಲುಗಳನ್ನು ಹಿಡಿದಾತನ ಕಡೆಗೆ ಹುಚ್ಚು ತುಂಬಿದ ಕಣ್ಣುಗಳಿಂದ ನೋಡಿದೆ. ಅವರೂ ನನ್ನ ಹಾಗೆಯೆ ದಂಗುಬಡಿದು ಕುಳಿತಿದ್ದರು. ಇದನ್ನು ನೋಡಿ

ಬಿಳಿಯುಡುಪಿನ ವ್ಯಕ್ತಿಯು ಮುಂದೆ ಬಂದು, ಆತನನ್ನು ಎತ್ತಿ ಮತ್ತೆ ಪಲ್ಲಂಗದ ಮೇಲೆ ಕುಳ್ಳಿರಿಸಿದನು. ಇದೇ ಸಂಧಿಯನ್ನು ಸಾಧಿಸಿ ಓಡಿ ಹೋಗಬೇಕೆಂದೆನಿಸಿತು. ಆದರೆ ರಾಯರ ಮುಖ ನೋಡಿ ಭಯಗೊಂಡು, ಆದದ್ದಾಗಲಿಯೆಂದು ಸುಮ್ಮನೆ ಕುಳಿತೆ. ಅಲ್ಲಿಂದ ಆ ಸಾಹೇಬನು ಬಿಳಿಯುಡುಪಿನ ವ್ಯಕ್ತಿಯನ್ನು ಕರೆದು, ಕಿವಿಯಲ್ಲಿ ಏನೋ ಹೇಳಿ, ನಮ್ಮ ಕಡೆಗೆ ಒಂದೇ ಸವನೆ ನೋಡತೊಡಗಿದನು. ನಾನು ಮತ್ತೆ ಗಾಬರಿ ಯಾದೆ. 'ಗಾಬರಿಯಾಗಬೇಡಿರಿ' ಎಂದು ಸಾಹೇಬನು ನನ್ನ ಹುಚ್ಚಿಟ್ಟ ಮುಖವನ್ನು ನೋಡಿ ನುಡಿದನು. ಬಿಳಿಯುಡುಪಿನವನಿಗೆ ನನ್ನ ಈ ಸ್ಥಿತಿ ಯನ್ನು ನೋಡಿ, ಕನಿಕರವೋ–ತಿರಸ್ಕಾರವೋ ನನಗೆ ಗೊತ್ತಾಗಲಿಲ್ಲ. ಸಾಹೇಬನನ್ನು ನೋಡಿ ಒಂದು ತೆರದ ತೃಪ್ತಿಯ ಮುಗುಳ್ನಗೆಯನ್ನು ನಗುವನು. ನನ್ನನ್ನು ನೋಡಿ ಹೆಮ್ಮೆಯ ಒಂದು ಗಂಭೀರಭಾವವನ್ನು ಮುಖದ ಮೇಲೆ ತೋರಿಸುವನು. ಒಮ್ಮೊಮ್ಮೆ ಒಳಗೊಳಗೇ ನಗು ವನು. ಇದರ ಅರ್ಥವೇನೂ ನನಗೆ ಗೊತ್ತಾಗಲಿಲ್ಲ. ದೊಡ್ಡವರ ಸಹ ವಾಸ–ಎಂದುಕೊಂಡು ಸುಮ್ಮನೆ ಕುಳಿತುಕೊಂಡೆ. ರಾಯರು ಮಾತ್ರ ಸ್ವಲ್ಪ ಮುಖವನ್ನು ತಗ್ಗಿಸಿದರು. ಸಾಹೇಬರು ಕಂಡು ಕಾಣದವರಂತೆ ನಮ್ಮೆಲ್ಲರನ್ನೂ ನೋಡಿ, ಮುಖದ ಮೇಲೆ ಯಾವ ಭಾವವನ್ನೂ ತೋರಿ ಸದೆ ಶಾಂತರಾಗಿ ಮಾತಾಡಲಿಕ್ಕೆ ಪ್ರಾರಂಭ ಮಾಡಿದರು:—

"ಆಚಾರ್ಯರೆ, ಪಾದ್ರಿಯವರೆ, ಗಾಬರಿಯಾಗಬೇಡಿರಿ. ನನ್ನಿಂದ ಈಗ ಹೊರಡುವ ಮಾತುಗಳು ನಿಮ್ಮನ್ನು ನೋಯಿಸಬಹುದು. ಆದರೆ ಮಾಡುವದೇನು? ಸತ್ಯವು ಕಠೋರವಾಗಿದ್ದರೂ ಅದನ್ನು ನುಡಿಯುವ ವೇಳೆಯು ನನ್ನ ಪಾಲಿಗೆ ಬಂದಿದೆ. ದಯೆಯಿಟ್ಟು ನೀವಿಬ್ಬರೂ ನನ್ನನ್ನು ಮನ್ನಿಸಬೇಕು. ನನ್ನನ್ನೀಗ ಶಂಕಿಸಬೇಡಿರಿ. ನಾನೀಗ ಮರಣಶಯ್ಯೆಯ ಮೇಲಿದ್ದೇನೆ. ಉಸಿರುಸಿರೂ, ಅಕ್ಷರಕ್ಷರವೂ, ಪಾಶ್ಚಾತ್ತಾಪದಿಂದ ಪರಿತಪ್ತವಾದ ಹೃದಯಾಗ್ನಿಕುಂಡದೊಳಗಿಂದ ಹಾಯ್ದು ಬರುತ್ತಿವೆ ಯೆಂದು ಭಾವಿಸಬೇಕು. ಯಾವ ಮಾತನ್ನೂ ಮರೆಮಾಚದೆ ಹೇಳು ತ್ತೇನೆ, ಕೇಳಬೇಕು. 'ಮಾಡಿದ ಪಾಪವನ್ನು ಆಡಿ ಕಳೆದುಕೊಳ್ಳ ಬೇಕೆಂಬುದನ್ನು ಸಾವಿನ ಸವಿಯನ್ನರಿತ ಸತ್ಯವಂತರು ಹೇಳುವರು.

ಆ ಸತ್ಯವಂತರ ಸತ್ಯವನ್ನು ಸ್ಮರಿಸಿ, ನಾನೀಗ ಹೇಳುತ್ತೇನೆ. ನನ್ನ ಅವ ಸಾನಕಾಲವು ಸಮೀಪಿಸಿದ್ದರಿಂದ ಎಲ್ಲವನ್ನೂ ಹೇಳಲಿಕ್ಕಾಗುತ್ತದೆಯೋ ಇಲ್ಲವೊ, ನಾನು ಹೇಳಲಾರೆ. ಮೊದಲು ಯಾವುದು-ಕೊನೆಯಾವುದು ಎಂಬುದರ ಅರಿವು ಕೂಡಾ ನನಗೆ ಉಳಿಯಲಿಕ್ಕಿಲ್ಲ. ಎದೆ ನೋವು ಇನ್ನೂ ಹೆಚ್ಚುತ್ತಲೇ ಇದೆ ಆದ್ದರಿಂದ ಸಾವಧಾನದಿಂದ ಕೇಳಬೇಕೆಂದು ನಾನು ಮೊದಲು ತಮ್ಮನ್ನು ಪ್ರಾರ್ಥಿಸುತ್ತೇನೆ.

'ನಾನು ಮೊದಲು ಬ್ರಾಹ್ಮಣನು. ವೈಷ್ಣವ ಮತದವನು. ತಂದೆ ತಾಯಿಗಳಿಬ್ಬರೂ—ನಾನು ಚಿಕ್ಕವನಿರುವಾಗಲೇ ತೀರಿಕೊಂಡರು. ಅನಾಥ ನಾದ ನಾನು ಅಂದಿನಿಂದಲೇ ನಮ್ಮ ಸಮಾಜಕ್ಕೆ ಭಾರವಾದೆ. ಆದರೆ ನನ್ನ ಪುಣ್ಯಾಂಶವು ಇನ್ನೂ ತೀರಿದ್ದಿಲ್ಲವೆಂದೇ ಸೋದರಮಾವನ ಮನೆ ಯಲ್ಲಿದ್ದುಕೊಂಡು, ಕನ್ನಡ ಅಭ್ಯಾಸ ಮುಗಿಸಿದೆ. ಅಷ್ಟೊತ್ತಿಗೆ ಸೋದರ ಮಾವನೂ ತೀರಿಕೊಂಡನು. ಅಲ್ಲಿಂದ ನನ್ನ ಜೀವನಕ್ರಮವೇ ಬೇರೆ ಯಾಯಿತು ಮೊದಲಿನಿಂದಲೂ ದೇವರಲ್ಲಿ ವಿಶ್ವಾಸವುಳ್ಳವನು. ಆದರೆ ಹೊಟ್ಟೆಗಾಗಿ ನಾನು ಹೋರಾಡಬೇಕಾದ್ದರಿಂದ ದೇವರನ್ನು ಕೆಲವು ಕಾಲ ಮರೆತೆ. ಆದರೆ ದ್ವೇಷಿಸಲಿಲ್ಲ. ಮನೆಮನೆಗೆ ಅಂಡಲೆದು ನನ್ನ ಜೀವ ನವು ಬೇಸರಗೊಂಡಿತು. ಆಶೆ ನಿರಾಶೆಗಳ ಹೊಯ್ದಾಟ ನನ್ನಲ್ಲಿ ಹೆಚ್ಚು. ನನಗೆ ಹೊಟ್ಟೆಗಿಲ್ಲದಿದ್ದರೂ ಆಗ ನನಗೆ ಸಾಯಬೇಕೆಂಬ ಕಲ್ಪನೆಯು ಬಂದಿರಲಿಲ್ಲ. 'ಇನ್ನೂ ಬಾಳಬೇಕು. ಕಲಿಯಬೇಕು. ಮುಂದಾಗ ಬೇಕು.' ಇವೇ ನನ್ನನ್ನು ಇಲ್ಲಿಯವರೆಗೆ ತಂದು ಮುಟ್ಟಿಸಿದವು. ವಾರ ಹಚ್ಚಿಕೊಂಡು ಇಂಗ್ಲೀಷ್ ಏಳು ಇಯತ್ತೆಗಳನ್ನು ಮುಗಿಸಿದೆ. ಇದೇ ರೀತಿಯಾಗಿ ಭಿಕ್ಷೆ ಬೇಡಿ ಕಾಲೇಜಿಗೆ ಹೋಗಿ, ಬಿ. ಎ. ಕೂಡಾ ಪಾಸಾದೆ. ನನ್ನ ಪುಣ್ಯದ ಫಲವು ಇಲ್ಲಿಗೆ ತೀರಿದಂತಾಯಿತು. ದುರ್ದೈವಕ್ಕೆ ಅದೇ ವರ್ಷ ಮದುವೆಯಾಯಿತು. ಬಿ. ಎ. ಆಗಿದ್ದೇನೆ, ಎಲ್ಲಿಯಾದರೂ ಸುಖಿ ವಾಗಿರಬಹುದೆಂದು ತಿಳಿದುಕೊಂಡಿದ್ದೆ. ಆದರೆ ನನಗಿಂತಲೂ ನನ್ನ ದೈವ ಮುಂದೋಡಿ ಬಂದು ಕುಳಿತಿತ್ತು. ಅಲ್ಲಿ ಹುಡುಕು ಇಲ್ಲಿ ಹುಡುಕು— ಎನ್ನುವದರೊಳಗಾಗಿ ಮೂರು ವರ್ಷಗಳು ದಾಟಿದವು. ನೌಕರಿ ಸಿಗ ಲಿಲ್ಲ. 'ಬಡತನಕ್ಕೆ ಶನಿಯ ಕಾಟ' ಎಂಬುವಂತೆ ಒಂದು ಗಂಡು ಕೂಸು

ಹುಟ್ಟಿತು. ಇಬ್ಬರಿದ್ದವರು ಮೂವರಾದೆವು. 'ಹೊಟ್ಟೆಯ ಗತಿ ಏನು?' ಎಂದು ಬಹಳ ವಿಚಾರ ಮಾಡಿದೆ. ಯಾವುದೂ ಬಗೆಹರಿಯಲಿಲ್ಲ. ಹೋದ ಹೋದಲ್ಲಿ 'ನಿಮ್ಮದು ಯಾವ ಜಾತಿ?' ಎಂದು ಕೇಳಿ 'ಬ್ರಾಹ್ಮಣ ನೆಂದೊಡನೆ ನಿರ್ದಾಕ್ಷಿಣ್ಯವಾಗಿ ಹಿಂದೂಡಿದರು. 'ಅಯ್ಯೋ! ನಾನು ಬ್ರಾಹ್ಮಣನಾಗಿ ಹುಟ್ಟಿದ್ದು ತಪ್ಪಾಯಿತೇ? ಎಂದು ಬಹಳ ಕನವಿಸಿ ಪಟ್ಟೆ. ಆದರೇನು ಪ್ರಯೋಜನ? ಕನವಿಸಿಯನ್ನು ಯಾರು ಕೇಳುವವರು! ಹಡೆದ ಮಕ್ಕಳಿಗೆ ಕೂಡಾ ದುಡಿಸಿಕೊಂಡು ಹೊಟ್ಟೆಗೆ ಹಾಕದ ನಮ್ಮ ಸಮಾಜವನ್ನು ಅದೆಷ್ಟೋ ಹಳಿದೆ ಮನದಲ್ಲಿ. ಕುತ್ತಿಗೆಯನ್ನು ಹಿಸುಕಿ ಅರೆಜೀವ ಮಾಡುವ ಬಡತನದ ಭಯಂಕರ ಭೂತಕ್ಕೆ ಅಂಜಿ ನಡುಗಿದೆ. ಕಣ್ಣುಗಳು ತಾವಾಗಿಯೇ ಮುಚ್ಚಿಕೊಂಡವು. ಆಗ, ಹೊಟ್ಟೆಗಿಲ್ಲದೆ ಬೆಂದು ಬಾಡಿದ ನನ್ನ ಹೆಂಡತಿಯ ಮುಖದ ಚಿತ್ರ, ಅವಳ ಎದೆಯ ಹಾಲು ಬಾರದ್ದಕ್ಕೆ ಆಕ್ರೋಶ ಮಾಡುವ ಆ ಕಂದನ ಕರಳು ಕಿವು ಚುವ ಚಿತ್ರ, ಅಯ್ಯೋ! ಇಷ್ಟು ಕಲಿತೂ, ಇವರ ಹೊಟ್ಟೆಗೆ ಹಾಕ ಲಿಕ್ಕೆ ನನ್ನಲ್ಲಿ ಶಕ್ತಿ ಇಲ್ಲವಲ್ಲ! ಎಂದು ಕಳವಳಗೊಂಡು, ಮುಂಗಾಣದೆ ತಲೆಗೆ ಕೈ ಹಚ್ಚಿಕೊಂಡು ಕುಳಿತ ನನ್ನ ಚಿತ್ರ, ಈ ಮೂರೂ ಚಿತ್ರಗಳು ನನ್ನ ಮುಚ್ಚಿದ ಕಣ್ಣುಗಳೆದುರಿಗೆ ಬಂದು ನಿಂತವು. ನಿರ್ವಿಣ್ಣರಾದ ನನ್ನ ಹೆಂಡತಿ ಮಕ್ಕಳ ಎದೆಯ ಮೇಲೆ ಸಮಾಜದ ಸೈತಾನವು ಪ್ರಳಯ ತಾಂಡವವನ್ನಾಡುತ್ತಿರುವಂತೆ ನನಗೆ ಭಾಸವಾಯಿತು. ಚಿಟ್ಟನೆ ಚೀರಿ ಕಣ್ಣು ತೆರೆದೆ. ಮೈಮೇಲಿನ ಕೂದಲು ನೆಟ್ಟಗಾಗಿದ್ದವು. ನಡಗುವದು ಇನ್ನೂ ಕಡಿಮೆಯಾಗಿರಲಿಲ್ಲ. ಮನಸು ಕಲಮಲವಾಗಿತ್ತು. ನನ್ನ ಈ ಸಂಕಟವು ಪರರಿಗೆ ತಿಳಿಯಲಿಲ್ಲ. ಇಷ್ಟಾದರೂ ಇನ್ನೂ ಬದುಕಬೇಕೆಂಬ ಆಶೆ ಬಿಟ್ಟಿರಲಿಲ್ಲ. ಕೂಲಿ ಮಾಡಿಯಾದರೂ ಹೊಟ್ಟೆ ಹೊರಕೊಳ್ಳಬೇಕೆಂದರೆ ದೇಹವನ್ನೆಲ್ಲಾ **ತಲೆಗೂ-ಬಡತನಕ್ಕೂ** ಹಂಚಿಕೊಟ್ಟ ನನ್ನಂತಹನಿಗೆ ಸಾಧ್ಯವೆ? ಇಲ್ಲ. ಭಿಕ್ಷೆ ಬೇಡಿಯಾದರೂ ನೋಡಬೇಕೆಂದು ಹದಿನೈದು ದಿವಸಗಳವರೆಗೆ ಭಿಕ್ಷೆ ಬೇಡುವದರೊಳಗಾಗಿ ಹಾಕುವವರೇ ಸಿಗದಂತಾ ದರು. ಬಹಳ ಸಂಕಟವಾಯಿತು. ಮಾಡುವದೇನು? ಇತ್ತ ಸಮಾಜವೂ ಕೈಬಿಟ್ಟಿತು. ಅತ್ತ ಧರ್ಮವೂ ಕೈಬಿಟ್ಟಿತು. ಅಂದಿನಿಂದ ಮಾತ್ರ ನನ್ನ

ವಿಚಾರದಲ್ಲಿ ಸ್ವಲ್ಪ ಬದಲಾವಣೆಯಾಯಿತು. 'ನಿನ್ನಿಂದ ನನಗೆ ಏನೂ ಅವಶ್ಯವಿಲ್ಲ. ನಿನಗೆ ನಾನು ಅನ್ನವನ್ನು ಕೊಡಲಾರೆ' ಎಂದು ಜಗತ್ತು ನನಗೆ ಸಾರಿಸಾರಿ ಹೇಳಿದಂತಾಯಿತು. ಜಗತ್ತಿನಲ್ಲಿ ನನಗೆ ಸ್ಥಾನವಿಲ್ಲವೆಂದು ತಿಳಿದ ಮೇಲೆ ನಾನು ಮಾಡುವದೇನು ? ಜಗತ್ತು ಬಿಟ್ಟುಹೋಗುವದು. ಒಂದು ರಾತ್ರಿ, ಹೆಂಡತಿ-ಮಗು ಇವರನ್ನು ಬಿಟ್ಟು ಸಾವನ್ನರಸಬೇಕೆಂದು ಹೊರಬಿದ್ದೆ. ಉಟ್ಟ ಧೋತರವೊಂದನ್ನು ಬಿಟ್ಟು, ಮೈಮೇಲೆ ಮತ್ತೇನೂ ಇರಲಿಲ್ಲ. ಎಲ್ಲಿಯಾದರೂ ಮಲಗುವದು, ನೀರು ಕುಡಿಯುವದು. ಮತ್ತೆ ಮುಂದೆ ಸಾಗುವದು. ಹೀಗೆ ಒಂದು ದಿನವಾಯಿತು. ಎರಡು ದಿನವಾಯಿತು. ಮೂರು ದಿನವಾಯಿತು. ಸಾವು ಸಿಗಲಿಲ್ಲ. ಮೂರನೆಯ ದಿವಸ ಸಂಜೆಗೆ ಒಂದು ಹಳ್ಳಿಗೆ ಬಂದೆ. ಅಂದು ಆದಿತ್ಯವಾರ. ಆ ಊರಲ್ಲಿ ಜನರ ಗದ್ದಲ ಹೆಚ್ಚಾಗಿದ್ದಿತು. ಸಂತೆ ಇರಬಹುದೆಂದು ಮೊದಲು ನನ್ನ ತಿಳಿವಳಿಕೆಯಾಯಿತು. ಆದರೆ ಮುಂದೆ ಅರ್ಧತಾಸಿನ ಮೇಲೆ ಈ ಪಾದ್ರಿಗಳ ಭೆಟ್ಟಿಯಾಯಿತು. ಇವರೇ ನನ್ನನ್ನು ಮೊದಲು ಮಾತನಾಡಿಸಿದರು. "ನಿಮ್ಮದು ಯಾವೂರು ?" ಎಂದು. ಅದಕ್ಕೆ ನಾನು ಉತ್ತರ ಕೊಡದೆ "ಇಂದು ಈ ಊರ ಸಂತೆಯೋ ?" ಎಂದು ಕೇಳಿದೆ. "ಅಲ್ಲ ! ಇಂದು ಆದಿತ್ಯವಾರ. ಚರ್ಚಿಗೆ ಜನರು ಬಂದಿದ್ದಾರೆ. ನಿಮ್ಮದು ಯಾವೂರು ?" ಎಂದು ಮತ್ತೆ ಕೇಳಿದರು. ನಾನು ಯಾವುದೋ ಒಂದು ಸುಳ್ಳು ಊರನ್ನು ಹೇಳಿ, ಅವರನ್ನು ಮೋಸ ಮಾಡಿದೆ. ಅಲ್ಲಿಂದ ಪಾದ್ರಿಗಳು— "ನೀವು ಎಲ್ಲಿಗೆ ಹೊರಟಿದ್ದೀರಿ ? ಏತಕ್ಕಾಗಿ ಹೊರಟಿದ್ದೀರಿ ? ಮೈಮೇಲೆ ಬಟ್ಟೆಬರೆಗಳೇಕೆ ಇಲ್ಲ ? ನೋಡಿದರೆ ಓದಿಕೊಂಡವರಂತೆ ಕಾಣುತ್ತೀರಿ. ನಿಮಗೆ ಆಪ್ತರು ಯಾರೂ ಇಲ್ಲವೆ ? ನಾನು ನಿಮ್ಮ ಬಂಧುವೆಂದು ತಿಳಿದು, ನನ್ನೆದುರಿಗೆ ನೀವು ಎಲ್ಲವನ್ನೂ ಹೇಳಬೇಕು. ನನ್ನ ಕೈಲಾದಷ್ಟು ಸಹಾಯ ಮಾಡುತ್ತೇನೆ." ಎಂದು ನನಗೆ ಗಂಟೇ ಬಿದ್ದರು. ನಾನೂ ತುಣು ತುಣುಕಾಗಿ ನನ್ನ ಕತೆಯನ್ನು ಅವರಿಗೆ ತಿಳಿಸಿದೆ. ಅವರು ಅದರ ಸೂಕ್ಷ್ಮವನ್ನರಿತು 'ನೀವು ಕ್ರಿಶ್ಚನ್ನರಾಗುವಿರಾ ?" ಎಂದು ಪರ್ಯಾಯದಿಂದ ಕೇಳಿದರು. ಅದಕ್ಕೆ ನಾನೂ ಪರ್ಯಾಯದಿಂದ 'ನಾಳೆ ನಿಮಗೆ ತಿಳಿಸುತ್ತೇನೆ' ಎಂದು ಉತ್ತರ ಕೊಟ್ಟು, ಅವರು ತಮ್ಮೊಡನೆ ಬರಲು

ಅದೆಷ್ಟು ಆಗ್ರಹ ಪಡಿಸಿದರೂ, ಅವರ ಮನಸ್ಸನ್ನು ಮುರಿದು, ಆ ಊರಲ್ಲಿಯ ಧರ್ಮಶಾಲೆಯಲ್ಲಿ ಬಂದು ಒಬ್ಬನೇ ಮಲಗಿಕೊಂಡೆ. ನಿದ್ರೆ ಹತ್ತಲಿಲ್ಲ. ಭೀಕರಚಿತ್ರಗಳು ಮನಸಿನಲ್ಲಿ ಮೂಡತೊಡಗಿದವು. ಒಳಗಿನ ಜೀವವು,–ನೀರಿನಲ್ಲಿ ಮುಳುಗಿದವನು ಉಸಿರಾಡಿಸಲಿಕ್ಕೆ ಅವಕಾಶವಿಲ್ಲದೆ, ಕಕ್ಕಸಬಡುವಂತೆ,–ಅನಿರ್ಣಯದ ಮುಸುಕಿನಲ್ಲಿ ಸಿಕ್ಕು ಕಕ್ಕಸಬಡುತ್ತಿತ್ತು. ಧರ್ಮವಾತ್ಸಲ್ಯವೊಂದು ಕಡೆಯಾದರೆ ಹೊಟ್ಟೆಯ ಎಳೆತ ಮತ್ತೊಂದು ಕಡೆ. ನನ್ನ ತರ್ಕಶುದ್ಧವಾದ ಅಂತಃಕರಣವು ನಮ್ಮ ಸಮಾಜದ ಅವನತಿಯನ್ನು ಕಂಡು ಕಲಮಲಗೊಂಡರೂ, ಆ ಸಮಾಜವನ್ನು ಎತ್ತಿ ಹಿಡಿಯಲು ಶಕ್ತಿಯಿಲ್ಲದೆ ಕುಸಿಬಿದ್ದಿತು. ಅಯ್ಯೋ ಬ್ರಾಹ್ಮಣ್ಯವೇ! "ವೈಶ್ಯ ಕರ್ಮ ಮಾಡಿಯೂ ಅದೆಷ್ಟು ಜನ ಬ್ರಾಹ್ಮಣರಾಗಿ ಉಳಿದಿಲ್ಲ. ಶೂದ್ರರಂತೆ ಆಚರಿಸಿದರೂ ಅವರು ಬ್ರಾಹ್ಮಣರಾಗಿಯೇ ಉಳಿದಿದ್ದಾರೆ. ಕೇವಲ ಹೊಟ್ಟೆಗಾಗಿ ಸೇವಾವೃತ್ತಿಯನ್ನು ಕೈಕೊಂಡ ಬ್ರಾಹ್ಮಣರು, ಇನ್ನೂ ಬ್ರಾಹ್ಮಣರಾಗಿಯೇ ಉಳಿದಿದ್ದಾರೆ. ಇವರೆಲ್ಲರೂ ಪ್ರಚ್ಛನ್ನ ಬ್ರಾಹ್ಮಣರು. ಕೇವಲ ಹೊಟ್ಟೆಗಾಗಿ ನಾನೇಕೆ ಕ್ರಿಶ್ಚನ್ನನಾಗಬಾರದು? ಕ್ರಿಶ್ಚನ್ನನ ಕರ್ಮವನ್ನು ಮಾಡಿದಾಗಲೂ ನಾನು ಬ್ರಾಹ್ಮಣನಾಗಿಯೇ ಉಳಿಯಬಹುದಲ್ಲವೇ?....ನನ್ನ ಹೆಂಡತಿ ಮಕ್ಕಳ ಗತಿ?! ಏನಾದರೂ ಮಾಡಲಿಕ್ಕೆ ಬಂದೀತು. ಈಗ ನಾನು ಪ್ರಚ್ಛನ್ನ ಬ್ರಾಹ್ಮಣನಾಗಬೇಕು." ಹೀಗೆಲ್ಲ ವಿಚಾರ ಮಾಡಿ, ಒಂದು ನಿರ್ಣಯಕ್ಕೆ ಬಂದು ಮುಟ್ಟಿದೆ. ಆ ನಿರ್ಣಯವು, ಆ ರಾತ್ರಿಯಲ್ಲಿ ನನಗೆ ಸಮಂಜಸವೆಂದೇ ತೋರಿತು. ಆದರೆ ಅದಕ್ಕಾಗಿ ನಾನು ಕೊಟ್ಟಿರುವ ಬೆಲೆಯ ಅರಿವು ಮಾತ್ರ ಆಗ ನನಗಿರಲಿಲ್ಲ. ಈಗ ಗೊತ್ತಾಗಿದೆ. ಆ ರಾತ್ರಿಯು ನನ್ನ ಇಡೀ ಜೀವಮಾನವನ್ನು ನಿರ್ಣಯಿಸಿದ ರಾತ್ರಿಯು. ಅದನ್ನು ನಾನು ಎಂದೂ ಮರೆಯುವಂತಿಲ್ಲ. ಹೂಶ್! ಉಬ್ಬಸ ಬರಹತ್ತಿದೆ. ಎದೆ ನೋವು··ಹೆ..ಚ್ಚಾ..ಗಿ..ದೆ!" ಎಂದು ಸ್ವಲ್ಪ ದಿಂಬಿಗೆ ಒರಗಿದರು. ಅಲ್ಲಿಂದ ಆಳು ಒಳಗಿನಿಂದ 'ಕಾಫೀ' ತಂದುಕೊಟ್ಟನು. ಅದನ್ನು ಕುಡಿದರು. ಸ್ವಲ್ಪ ಹಗುರಾದಂತಾಯಿತು. ಮತ್ತೆ ಮಾತನಾಡಿದರು.

"ನಾನು ಇಷ್ಟೆಲ್ಲ ವಿಚಾರ ಮಾಡಿ ಒಂದು ನಿರ್ಣಯಕ್ಕೆ ಬಂದಾಗ

ರಾತ್ರಿ ಎರಡು ಗಂಟೆಯಾಗಿರಬಹುದು. ತಲೆಯ ಭಾರವು ಸ್ವಲ್ಪ ಹಗುರಾದಂತಾಗಿ, ಅದೇ ನಿದ್ರೆ ಹತ್ತುವದರಲ್ಲಿತ್ತು. ಅಷ್ಟರಲ್ಲಿ ಯಾರೋ ಬರುವ ಕಾಲ ಸಪ್ಪಳು ಕೇಳಿ, ಮತ್ತೆ ಎದ್ದು ಕುಳಿತೆ. ಹತ್ತಿರ ಬರುವವರೆಗೆ ಯಾರೆಂಬುದು ಗೊತ್ತಾಗಲಿಲ್ಲ. ಗಾಬರಿಯಾಗಿ "ಯಾರವರು ?" ಎಂದು ಕೇಳಿದೆ. ನಗುತ್ತಾ "ನಾನು" ಎಂದು ಇದೇ ಪಾದ್ರಿಗಳು ಉತ್ತರ ಕೊಟ್ಟರು. ಧ್ವನಿಯ ಮೇಲೆ ನನಗೆ ಗುರುತು ಹತ್ತಿತು. "ಬರ್ರಿ–ಬರ್ರಿ." ಎಂದು ಎದ್ದುಹೋಗಿ, ಅವರನ್ನು ಕೈಹಿಡಿದು ಕರೆದುಕೊಂಡು ಬಂದು, ನಾನು ಮಲಗಿದ್ದಲ್ಲಿ ಕುಳ್ಳಿರಿಸಿ, ನಾನೂ ಅವರ ಹತ್ತಿರ ಕುಳಿತುಕೊಂಡೆನು. ಪಾದ್ರಿಗಳು ಅಲ್ಲಿಂದ ತಮ್ಮ ಜೇಬಿನೊಳಗಿಂದ ಐದಾರು ಕಿತ್ತಳೆ ಹಣ್ಣುಗಳನ್ನು ತೆಗೆದು,ನನಗೆ ತಿನ್ನಲು ಕೊಟ್ಟರು. ಮೂರು ದಿವಸಗಳಿಂದ ಹೊಟ್ಟೆಯಲ್ಲಿ ಏನೂ ಇಲ್ಲದ್ದರಿಂದ, ಅವುಗಳನ್ನು ಗಬಗಬನೆ ತಿಂದು ಮುಗಿಸಿದೆ. ಇದನ್ನು ನೋಡಿ ಪಾದ್ರಿಗಳು "ಸಾವಕಾಶವಾಗಲಿ" ಎಂದು ಚೇಷ್ಟೆ ಮಾಡಿದರು. ನನಗೆ ಅದೆಲ್ಲ ಲಕ್ಷ್ಯವಿದ್ದಿಲ್ಲ. ಮುಂದೆ ಕೆಲ ಹೊತ್ತಿನ ಮೇಲೆ ಆ ಮಾತು–ಈ ಮಾತುಗಳಾದ ಬಳಿಕ, ನಾನೇ ಪಾದ್ರಿಗಳಿಗೆ ನನ್ನ ನಿಶ್ಚಯವನ್ನು ತಿಳಿಸಿದೆ. ಅವರಿಗೆ ಬಹಳ ಆನಂದವಾಯಿತು. ನನ್ನನ್ನು ಕರೆದುಕೊಂಡು ತಮ್ಮ ಮನೆಗೆ ಮೊದಲು ಹೋದರು. ಅಲ್ಲಿ ಬೆಳಗಾಗುವವರೆಗೆ ಮಲಗಿಕೊಂಡೆ. ಮುಂಜಾನೆ ಬೇಗನೆ ಎದ್ದು, ಪಾದ್ರಿಗಳು ಮಮತೆಯಿಂದ ನನ್ನ ಹೆಗಲ ಮೇಲೆ ಕೈ ಹಾಕಿ, ತಮ್ಮ ಚರ್ಚಿಗೆ ನನ್ನನ್ನುಕರೆದುಕೊಂಡು ಹೋಗಿ,ದೀಕ್ಷೆಯನ್ನು ಕೊಟ್ಟರು .ಆಚಾರ್ಯರೇ, ತಮಗೆ ಒಂದು ಮಾತು ಇಲ್ಲಿ ಹೇಳಬೇಕಾಗಿದೆ. ನಾನು ಕ್ರಿಶ್ಚನ್ನನಾಗಿದ್ದರೂ ತತ್ತಿ, ಮಾಂಸ, ಸರಾಯಿ, ಇವಾವುವುಗಳನ್ನೂ ಇನ್ನೂ ವರೆಗೂ ಸ್ವೀಕರಿಸಿಲ್ಲ. ಪರಸ್ತ್ರೀಯರನ್ನು ಕಾಮುಕದೃಷ್ಟಿಯಿಂದ ನೋಡಿಲ್ಲ. ಹೂssಶ್–! ಬಾಯಾರಿತು!" ಎಂದು ಮತ್ತೆ ಕಣ್ಣು ಮುಚ್ಚಿದರು. ಮತ್ತೆ ಕಾಫೀ ಕುಡಿದು, ಮೊದಲಿಗಿಂತ ಕ್ಷೀಣ ಧ್ವನಿಯಲ್ಲಿ ಮಾತನಾಡಿದರು:

"ಅವಸಾನಕಾಲ ಸಮೀಪಿಸಿತು. ನಾಲಗೆ ಬಳಸೇರಹತ್ತಿದೆ.... ಇಲ್ಲಿಯವರೆಗೆ ಆದದ್ದೆಲ್ಲಾ ಒಂದು ತೆರ. ಇದರ ಮುಂದಿನದೆಲ್ಲ

ಮತ್ತೊಂದು ತೆರ. 'ಕ್ರಿಶ್ಚನ್ನನಾದೆ' ಎಂಬುದು ಗೊತ್ತಾದೊಡನೆ ಮನಸಿಗೆ ಮುಳ್ಳು ಚುಚ್ಚಿದಂತಾಯಿತು. ಆದರೂ ಯಾವದನ್ನೂ ತೋರಗೊಡದೆ, ಕೆಲಕಾಲ ಪಾದ್ರಿಗಳ ಹಿಂದೆ ತಿರುಗಾಡಿದೆ. ನನ್ನ ಮೇಲೆ ಅವರ ಅಭಿಮಾನ ಹೆಚ್ಚಿತು. ನನ್ನಂತಹ ಸುಶಿಕ್ಷಿತನು ಕ್ರಿಶ್ಚನ್ನನಾದದ್ದಕ್ಕಾಗಿ ಅವರೂ ಮೇಲಕ್ಕೇರಿದರು. ನನ್ನ ಅಂತಃಕರಣದಲ್ಲಿಯ ಬಡಿದಾಟವನ್ನು ಅವರಿಗೆ ನಾನು ಇಂದಿನವರೆಗೂ ತೋರಿಸಿಲ್ಲ. ಈ ಹೊತ್ತು ಕೊನೆಗೆ ಹೇಳುತ್ತೇನೆ. ಪಾದ್ರಿಗಳ ವಶೀಲಿಯಿಂದ ನನಗೆ ಒಮ್ಮೆಲೇ ಪ್ರೊಬೇಶನರ್ ಮಾಮ್ಲೇದಾರರ ಕೆಲಸವು ದೊರೆಯಿತು. ಹೊಟ್ಟೆಯ ಚಿಂತೆ ತಪ್ಪಿತು. ಆದರೆ ಮನೆಯವರ ಗತಿ ಏನು? ಎಂದು ವಿಚಾರ ಮಾಡಿದೆ. ನಾನು ಇದ್ದಲ್ಲಿಯೆ ಅವರನ್ನು ಕರೆಯಿಸುವದು ಸಾಧ್ಯವಿದ್ದಿಲ್ಲ. ನಾನು ಅವರಲ್ಲಿಗೆ ಹೋಗುವದೂ ಸಾಧ್ಯವಿದ್ದಿಲ್ಲ. ಆಯಿತು, ಹೆಂಡತಿ ಮಕ್ಕಳನ್ನು ಮರೆಯಲ್ಲಿಟ್ಟು, ನಾನು ದೂರವಿದ್ದುಕೊಂಡು, ಅವರ ಹೊಟ್ಟೆಗೆ ಹಾಕುವ ಹೊತ್ತು ಬಂದಿತಲ್ಲಾ!' ಎಂದ. ನನ್ನಷ್ಟಕ್ಕೆ ನಾನೇ ಕನಿಕರ ಪಟ್ಟುಕೊಂಡೆ. ನನ್ನ ಜೀವನದಲ್ಲಿ, ಒಂದು ದೊರೆಯಿತು ಎನ್ನುವಷ್ಟರಲ್ಲಿ ಇನ್ನೊಂದು ಜಾರಿತು. ಮರೆಯಲ್ಲಿದ್ದುಕೊಂಡೇ ನನ್ನ ಹೆಂಡತಿ ಮಕ್ಕಳ ಯೋಗಕ್ಷೇಮವನ್ನು ನೋಡುತ್ತಿರುತ್ತೇನೆ. ಪಾಂಡುರಾಜನ ಶಾಪದಂತೆ, ಇದೊಂದು ನನಗೆ ಯಾರಿಂದಲೋ ಶಾಪವೆಂದು ತಿಳಿದು ಸುಮ್ಮನಿದ್ದೇನೆ. ಮುಂದೆ ಮಾಮ್ಲೇದಾರನ ಕೆಲಸದಿಂದ ಡೆಪ್ಯುಟಿಕಲೆಕ್ಟರನ ಕೆಲಸದವರೆಗೆ ಕ್ರಮೇಣ ಬಂದು ಮುಟ್ಟಿದ್ದೇನೆ. ದುಡ್ಡಿನ ಯಾವ ತಾಪವೂ ಇಲ್ಲ. ಮರ್ಯಾದೆಗೆ ಕೊರತೆಯಿಲ್ಲ. ಆದರೆ ಮನಸ್ಸಿನ ಶಾಂತಿಯೊಂದು ಮಾಯವಾಗಿದೆ. ಪಾದ್ರಿಯವರೇ, ದಯವಿಟ್ಟು ನನ್ನನ್ನು ಕ್ಷಮಿಸಬೇಕು. ನಾನೇನು ನಮ್ಮ ಧರ್ಮದಲ್ಲಿ ದೇವರು ಸಿಕ್ಕಲಿಲ್ಲವೆಂದು ನಿಮ್ಮ ಧರ್ಮಕ್ಕೆ ಶರಣು ಬರಲಿಲ್ಲ. ಕೇವಲ ಹೊಟ್ಟೆಗಾಗಿ ಇದೊಂದು ವೇಷವೆಂದು ನಿಮ್ಮ ಧರ್ಮವನ್ನು ಸ್ವೀಕರಿಸಿದ್ದೇನೆ. ನಾನಿನ್ನೂ ಬ್ರಾಹ್ಮಣನಾಗಿಯೇ ಉಳಿದಿದ್ದೇನೆ. ನಿಮ್ಮ ಧರ್ಮವನ್ನು ಸ್ವೀಕರಿಸಿದ್ದೇನೋ ನಿಜ. ಆದರೆ ನಿಮ್ಮ ಧರ್ಮದ ಕಟ್ಟಳೆಗಳನ್ನು ಮುರಿದ ಪಾಪದ ಹೊರೆಯು ನನ್ನ ತಲೆಯಮೇಲೆ ಕುಳಿತಿದೆ. ಒಂದು ದಿನವೂ ಮೂರ್ತಿ

ಪೂಜೆಯನ್ನು ಬಿಡಲಿಲ್ಲ. ಬೇಕಾದರೆ ನನ್ನ ಆ ದೇವರ ಮನೆಯನ್ನು ನೋಡಬಹುದು. ಯಾರಿಗೂ ನಾನು ಮಾಡುತ್ತಿರುವದು ಗೊತ್ತಾಗ ಬಾರದೆಂದು, ಆ ದೇವರ ಮನೆಯ ಬೀಗದ ಕೈಯನ್ನು ನನ್ನ ಹತ್ತಿರವೇ ಇಟ್ಟುಕೊಳ್ಳುತ್ತಿದ್ದೆ. ಪಾದ್ರಿಯವರೇ, ನನ್ನದೊಂದು ಕೊನೆಯ ಆಶೆ ಯಿದೆ. ನೀವು ಅದನ್ನು ನಡೆಯಿಸಿಕೊಡಲಿಕ್ಕೇಬೇಕು. ಜನ್ಮಭೂಮಿ ಯಲ್ಲಿಯೇ ಮಡಿಯಬೇಕೆಂದು ಪ್ರತಿಯೊಬ್ಬ ಮಾನವನ ಆಶೆಯಿರುತ್ತದೆ. ಹಾಗೆಯೇ ನಾನು ಹುಟ್ಟಿದ ಧರ್ಮದಲ್ಲಿಯೇ ಸಾಯಬೇಕೆಂದು ಗೊತ್ತು ಮಾಡಿಕೊಂಡಿದ್ದೇನೆ. ತಾವು ದಯವಿಟ್ಟು ಕೊನೆಯ ಸಂಸ್ಕಾರಗಳನು ನನ್ನ ಹುಟ್ಟಿದ ಧರ್ಮದಂತೆಯೇ ಮಾಡಲಿಕ್ಕೆ ಅಪ್ಪಣೆಯನ್ನು ಕೊಡ ಬೇಕು. ಆಚಾರ್ಯರೇ, ನಾನು ಪಾದ್ರಿಗಳಿಗೆ ಹೇಳಿದ್ದನ್ನು ಕೇಳಿದಿರಾ? ಅವರನ್ನು ನಾನು ಕೇಳಿಕೊಂಡಂತೆಯೇ ನಿಮ್ಮನ್ನೂ ಕೇಳಿಕೊಳ್ಳುತ್ತೇನೆ. ನನ್ನ ಕೊನೆಯ ಸಂಸ್ಕಾರಗಳು ನನ್ನ ಹುಟ್ಟಿದ ಧರ್ಮದಂತೆಯೇ ಆಗಬೇಕು. ನೀವೇ ಅದನ್ನು ನೆರವೇರಿಸಬೇಕು. ನನಗೆ ಗೋರಿಯನ್ನು ಕಟ್ಟಿಸಿಕೊಳ್ಳುವದು ಬೇಡ. ಆಚಾರ್ಯರೆ, ಇನ್ನೊಂದು ಮಾತು; ಸಮಾಜದ ವಕ್ರಕಟಾಕ್ಷದಿಂದ ನನ್ನ ಹೆಂಡತಿ ಮಕ್ಕಳನ್ನು ಪಾರು ಮಾಡುವ ಶಕ್ತಿಯು ತಮ್ಮಲ್ಲಿದ್ದರೆಯೆ ನೀವು ನನ್ನ ಈ ಚರಿತ್ರೆಯನ್ನು ಎಲ್ಲರಿಗೂ ತಿಳಿಸಬೇಕು. ಇಲ್ಲದಿದ್ದರೆ ಬೇಡ. ನಾನು ಮನೆಬಿಟ್ಟು ಬಂದು ಹನ್ನೆರಡು ವರ್ಷಗಳ ಮೇಲಾಯಿತು. (ನನ್ನ ಮಗನು ಈಗ ದೊಡ್ಡವನಾಗಿರಬಹುದಲ್ಲವೇ? ನನ್ನ ಹೆಂಡತಿಯು ಈಗ ಹೇಗಿರ ಬಹುದು?) ನನ್ನ ಹೆಂಡತಿಗೆ ನಾನು ತೀರಿಕೊಂಡ ಸುದ್ದಿಯನ್ನು ತಿಳಿಸ ಬೇಕು ಸಮಾಜವು ಅವಳನ್ನು ಈಗಾಗಲೇ ವಿಧವೆಯನ್ನಾಗಿ ಮಾಡಿರ ಬಹುದು!!........ಆಚಾರ್ಯರೆ, ಬಡತನದ ಭೂತಕ್ಕೆ ಅಂಜಿ, ಹೊಟ್ಟೆಯ ಪಾಡಿಗಾಗಿ, ಮನಸ್ಸಿನ ಶಾಂತಿಯನ್ನೂ ಧರ್ಮವನ್ನೂ ಕಳೆದುಕೊಂಡ ಈ ಪಾಪಿಗೆ ತಕ್ಕ ಪ್ರಾಯಶ್ಚಿತ್ತವೇನಾದರೂ ಉಂಟೇ? ಹಿಂದಿನ ಜನ್ಮ ದಲ್ಲಿಯ ಪಾಪಕ್ಕಾಗಿ ಈ ಜನ್ಮದಲ್ಲಿ ಅನುಭವಿಸಿದ್ದೆಲ್ಲ ಪ್ರಾಯಶ್ಚಿತ್ತವೇ. ಇನ್ನು ಈ ಜನ್ಮದಲ್ಲಿಯ ಪಾಪಕ್ಕೆ ಇನ್ನಾವ ಪ್ರಾಯಶ್ಚಿತ್ತವೋ ಕಾಣೆ. ನನ್ನನ್ನು ಬಿಟ್ಟು ಬಿಡಿರಿ. ನನ್ನ ಪಾಡು ನನಗೆ. ನನ್ನ ಈ

ಕತೆಯು ಗೊತ್ತಾದ ಮೇಲೆ ಸಮಾಜವು, ಪವಿತ್ರವಾದ ಆ ನನ್ನ ಮಗುವನ್ನು ಎತ್ತಿಕೊಳ್ಳುವದೇ? ಆಚಾರ್ಯರೆ, ಅವರಿಬ್ಬರನ್ನು ನಿಮ್ಮ ಉಡಿಯಲ್ಲಿ ಹಾಕಿದ್ದೇನೆ ..........ನನ್ನ ಮೊದಲಿನ ಹೆಸರು ಕೃಷ್ಣ. ಈಗಿನ ಹೆಸರು ಕೃಸ್ಟೋ. ಆಯಿತು........ಆಯಿತು........ಪಾದ್ರಿಯವರೆ,.... ಆಚಾರ್ಯರೆ........ಆಚಾರ್ಯರೆ,........ಪಾದ್ರಿಯವರೆ,.... ಕ್ಷಮಿಸಿರಿ.... ಆಚಾರ್ಯರೆ........ಇಕೊ........ಅಯ್ಯೋ........ನಾ—ರಾ—ಯ—ಣ....''

ಎಂದು ಹಿಂದಕ್ಕೆ ಬಿದ್ದುಬಿಟ್ಟರು. ನಮ್ಮ ರಾಯರು ಹತ್ತಿರ ಹೋಗಿ ನೋಡಿದರು. ಪ್ರಾಣಹೋಗಿ ಬಿಟ್ಟಿತ್ತು. ರಾಯರು ಗಾಬರಿಯಾಗಿ ನನ್ನ ಕಡೆಗೆ ನೋಡಿದರು. ನಾನೂ ಅವರನ್ನೇ ನೋಡಿದೆ. ಪಾದ್ರಿಗಳ ಮುಖವು ಮಾತ್ರ ಬಿಳುಪಿಟ್ಟಿತ್ತು. ಪೆಚ್ಚುಮುಖ ಮಾಡಿದ್ದರು. 'ಅಯ್ಯೋ, ನಾನು ಮೋಸ ಹೋದೆನಲ್ಲ!' ಎಂಬ ಭಾವವು ಮುಖದ ಮೇಲೆ ಒಡೆದು ಕಾಣುತ್ತಿತ್ತು. ಹೆಣದ ಮುಖವನ್ನು ದಿಟ್ಟಿಸಿ ನೋಡಿದರು. ಅಲ್ಲಿಂದ ಯಾರ ಜೊತೆಗೂ ಮಾತಾಡದೆ, ಒಂದು ತೆರದ ತಿರಸ್ಕಾರದ ನಗೆನಗುತ್ತ ಹೊರಗೆ ಹೊರಟುಹೋದರು. ರಾಯರು ಮತ್ತು ನಾನು ಇಬ್ಬರೇ ಉಳಿದೆವು. 'ಏನೇ ಆಗಲಿ. ನಮ್ಮ ಸಂಸ್ಕಾರ ಮಾಡಿಬಿಡೋಣ' ಎಂದು ರಾಯರು ನನಗೆ ಹೇಳಿದರು. ನಾನು 'ಹೂಂ ಆಗಲಿ' ಎಂದು ಹೇಳಿ, ಅಗ್ರಹಾರಕ್ಕೆ ಬಂದು, ನಮ್ಮಲ್ಲಿಯ ಇಬ್ಬರು ಮೂವರನ್ನು ಕರೆದುಕೊಂಡು ಹೋಗಿ, ಅಗ್ನಿಸಂಸ್ಕಾರ ಮಾಡಿ ಬಂದೆವು. ಮುಂದೆ ಎಂಟು ದಿನಗಳೊಳಗಾಗಿ ಈ ಸುದ್ದಿ ಊರಲ್ಲೆಲ್ಲಾ ಹಬ್ಬಿ, ರಾಯರಿಗೂ—ನಮಗೂ ಕೂಡಿಯೇ ಶ್ರೀಗಳವರಿಂದ ಬಹಿಷ್ಕಾರ ಪತ್ರಗಳು ಬಂದವು. ಆದರೆ ರಾಯರು ಪ್ರಾಯಶ್ಚಿತ್ತ ಮಾಡಿಕೊಂಡು (ಶ್ರೀಗಳವರು ಪ್ರಸನ್ನರಾಗುವಂತೆ) ಶುದ್ಧರಾದರು. ನಾನು ಮಾತ್ರ ಹಾಗೆ ಮಾಡಲಿಕ್ಕೆ ಗತಿಯಿಲ್ಲದೆ ಅಶುದ್ಧನಾಗಿಯೆ ಉಳಿದಿದ್ದೇನೆ. ಆ ಸಾಹೇಬರ ಹೆಂಡತಿಗೆ ಗಂಡನ ಸುದ್ದಿಯೆಲ್ಲವನ್ನೂ ತಿಳುಹಿಸಿದೆ. 'ಗಂಡ ಓಡಿಹೋಗಿ ಹನ್ನೆರಡು ವರ್ಷಗಳ ಮೇಲಾಗಿದ್ದರೂ ಇನ್ನೂ ಕಮಲಮ್ಮನು ಶುದ್ಧವಾಗಿಲ್ಲ. ಧರ್ಮಪರಾಯಣರಾದ ಶ್ರೀಗಳವರು ಪರಾಮರಿಸಬೇಕು.' ಎಂದು ಒಬ್ಬ ಆಚಾರ್ಯರು ಶ್ರೀಗಳವರಿಗೆ ಪತ್ರಬರೆದು,

ಸಮುಗಿಂತಲೂ ಮೊದಲೇ ಅವರಿಗೆ ಬಹಿಷ್ಕಾರ ಪತ್ರಗಳನ್ನು ತರಿಸಿದ್ದರು. ಆ ಹೆಣ್ಣುಮಗಳು ಗೋಳಾಡುವದನ್ನು ನೋಡಿದರೆ, ಯಾರಿಗೂ ಕನಿಕರ ಹುಟ್ಟದೆ ಇರದು. ಮಾಡುವದೇನು? ಹೂಶ್-ಅಪ್ಪಾ. ಹೋಗಿರಿ ಇನ್ನು ಆಡಲಿಕ್ಕೆ; ಕತೆ ಮುಗಿಯಿತು.'' ಎಂದು ಹೇಳಿದರು. ನಾವು ಚಿಣಿ ಫಣಿ ಆಟವಾಡಲಿಕ್ಕೆ ಹೊರಟು ಬಂದೆವು. ಪಾಟಿಯ ಮೇಲೆ ಬರೆದು ಅಳಿಸಿದಂತೆ, ಈ ಕತೆಯು ನಮ್ಮ ಆಟದ ಉಬ್ಬಿನಲ್ಲಿ ಅಳಿಸಿಹೋಯಿತು.



# ಗಿರಿಜಾ ಕಲ್ಯಾಣ

೧

ಬಾಲಕೃಷ್ಣರಾಯರು ತಮ್ಮ ಪತ್ನಿ ರುಕ್ಮಿಣಿಯಮ್ಮನವರೊಡನೆ ಸಂಜನಗೂಡಿನ ಯಾತ್ರೆಯನ್ನು ಮುಗಿಸಿಕೊಂಡು ಹೆಮ್ಮೆಯಿಂದ ಹಿಂದಿರುಗಿದರು. ಆಗ ಶ್ರೀರಂಗಪಟ್ಟಣದ ಜನರು, ರೈಲನ್ನಾಗಲಿ ಬಸ್ಸನ್ನಾಗಲಿ ಇನ್ನೂ ಕಂಡಿರಲಿಲ್ಲ. ಆದಕಾರಣ, ರಾಯರ ಯಾತ್ರೆಯು ಹೆಮ್ಮೆಪಡತಕ್ಕ ವಿಷಯವೇ ಆಗಿದ್ದಿತು. ರಾಯರ ಹೆಮ್ಮೆಗೆ ಮೂರು ಕಾರಣಗಳಿದ್ದುವು. ದಂಪತಿಗಳಾದ ತಮ್ಮಿರ್ವರ ಹೆಸರುಗಳೂ ಪುರಾಣದಂಪತಿಗಳಾದ ರುಕ್ಮಿಣೀ ಕೃಷ್ಣರ ಹೆಸರುಗಳನ್ನು ನೆನಪಿಗೆ ತರುವಂತಿದ್ದ ಕಾರಣ, ನಂಜನಗೂಡಿನ ಯಾತ್ರೆಯಿಂದ ತಮ್ಮ ಜೀವನವು—ಕೆತ್ತನೆಯ ಭಾಗ್ಯವನ್ನು ಪಡೆದ ಕಗ್ಗಲ್ಲಿನಂತೆ— ಕಲಾವಿಭವದಿಂದೊಡಗೂಡಿ ಸಾರ್ಥಕವಾಯಿತೆಂಬುದು, ರಾಯರ ಹೆಮ್ಮೆಗೆ ಮೊದಲನೆಯ ಕಾರಣ. ದಾರಿಯಲ್ಲಿ ಕಳ್ಳಕಾಕರ ಭೀತಿಯಿಂದಲೂ ಹೆದರದೆ, ಜೋಡೆತ್ತಿನ ಬಂಡಿಯಲ್ಲಿ ಅಷ್ಟು ದೂರ ಹೋಗಿ ಬಂದ ಎದೆಗಾರಿಕೆಯು, ಅವರ ಹೆಮ್ಮೆಗೆ ಎರಡನೆಯ ಕಾರಣ. "ದಾರಿಯಲ್ಲಿ ಕಳ್ಳರೇನೂ ಬರಲಿಲ್ಲವಲ್ಲಾ!" ಎಂದು ಹೇಳಿ ಅವರ ಹೆಂಡತಿಯು ಕೊಂಚ ಹಾಸ್ಯಮಾಡಿದಾಗ, ಅವರು "ಕಳ್ಳರು ಬಂದಿದ್ದರೂ ನಾನೇನೂ ನಿನ್ನ ಹಾಗೆ ಹೆದರುತ್ತಿರಲಿಲ್ಲ" ಎಂದು ಉತ್ತರಕೊಟ್ಟಿದ್ದರು. ಅಲ್ಲದೆ ರುಕ್ಮಿಣಿಯಮ್ಮನವರು ಆ ರೀತಿ ಹಾಸ್ಯಮಾಡುವಷ್ಟು ಸ್ವಾತಂತ್ರ್ಯವನ್ನು ವಹಿಸಿದ್ದಕ್ಕಾಗಿ, ತಮ್ಮ ಮನಸ್ಸಿನಲ್ಲುಂಟಾದ ನಸು ಮುನಿಸನ್ನೂ ಧ್ವನಿಯಿಂದಲೇ ವ್ಯಕ್ತಪಡಿಸಿ, ಹೆಂಡತಿಯು ತಮ್ಮ ಹೆಮ್ಮೆಯ ಮೇಲೆ ಹಾಸುಗಲ್ಲನ್ನು ಹೇರದಂತೆ

ಮಾಡಿಕೊಂಡರು. ಇನ್ನು ಮೂರನೆಯ ಕಾರಣದ ವಿಚಾರ. ಸ್ಮಾರ್ತರು ಹೆಚ್ಚೆಂದೂ ವೈಷ್ಣವರು ಹೆಚ್ಚೆಂದೂ ಪ್ರಾಣದೇವರ ದೇವಾಲಯದಲ್ಲಿ ವಾದಗಳು ನಡೆಯುತ್ತಿದ್ದ ಕಾಗಿನ ಅವಾಂತರದಲ್ಲಿ, ವೃದ್ಧನಾದ ಆಂಜನೇಯನಿಗೆ ಕಿವಿಗಳ ಪಾಟವವೇ ಕುಗ್ಗಿರಬೇಕೆಂದು ಅನೇಕರು ಸಿದ್ಧಾಂತ ಮಾಡುತ್ತಲೇ ಇದ್ದರು. ಈ ಬಗೆಯ ಸ್ಥಳವಿದ್ಯಮಾನವಿದ್ದೂ ಮಾಧ್ವರಾದ ತಾವು, ಅನ್ಯಮತ ಸಹಿಷ್ಣುತೆಗೆ ಮಾದರಿಯಾಗಿ, ನಂಜನಗೂಡಿನ ಸ್ಮಾರ್ತರ ದೇವಾಲಯಕ್ಕೆ ಹೋಗಿ ಬಂದುದು, ಅವರ ಹೆಮ್ಮೆಗೆ ಮೂರನೆಯ ಕಾರಣ. ಅವರ ಹೆಮ್ಮೆಯ ಭರಾಟೆಯಲ್ಲಿ ಮಾಧ್ವರು ಶಿವನನ್ನೂ, ಗೌರಿಯನ್ನೂ ಗಣೇಶನನ್ನೂ ಪೂಜಿಸುವ ಸಂಪ್ರದಾಯವೇ ಅವರ ಮನಸ್ಸಿಗೆ ಹೊಳೆಯಲಿಲ್ಲ. ಆದರೆ ಚನ್ನಪಟ್ಟಣದಿಂದ ಬಂದಿದ್ದ "ನಾಮದ ಅಯ್ಯಂಗಾರಿ" ಅದೇ ಶಿವದೇವಾಲಯಕ್ಕೆ ಬಂದು, ತೀರ್ಥಪ್ರಾಶನ ಮಾಡಿದ್ದ ದೃಶ್ಯವು ಅವರ ಕಣ್ಣೆದುರಿಗೆ ನಿಂತಾಗಲೆಲ್ಲಾ ಅವರ ಹೆಮ್ಮೆಯು ಕೊಂಚ ಕುಂಠಿತವಾದಂತೆ ತೋರುತ್ತಿದ್ದಿತು. ಆನೆಯು ಅಟ್ಟಿಸಿಕೊಂಡು ಬಂದರೂ ಶಿವದೇವಾಲಯ ಪ್ರವೇಶ ಮಾಡಕೂಡದ "ನಾಮದ ಅಯ್ಯಂಗಾರಿ" ಶ್ರೀಕಂಠೇಶ್ವರನ ಸನ್ನಿಧಿಗೆ ಭಕ್ತಿಯಿಂದ ಬಂದುದನ್ನು ಕಂಡು, ರಾಯರು ಅಪ್ರತಿಭರಾಗಿದ್ದರು. ಆದರೂ ಅವರ ಮನಸ್ಸಿನ ವಿಚಾರ ಸರಣಿಯು ಹೀಗಿದ್ದಿತು: ಆನೆಯು ನಿಜವಾಗಿಯೂ ಅಟ್ಟಿಸಿಕೊಂಡು ಬಂದರೆ—ಶಿವದೇವಾಲಯ ಪ್ರವೇಶದ ಮಾತು ಹಾಗಿರಲಿ—ಗುಂಬಜಿನಂತಹ ಗೋರಿಯ ಕಟ್ಟಡಕ್ಕಾದರೂ ಶಂಕೆಯಿಲ್ಲದೆ ಪ್ರವೇಶಿಸಿ 'ನಾಮದ ಅಯ್ಯಂಗಾರಿಯು' ಪ್ರಾಣವನ್ನುಳಿಸಿಕೊಳ್ಳುತ್ತಿದ್ದ. ಗುಂಡುಗೋವಿಯಂತೆ ಒಬ್ಬನೇ ನಂಜನಗೂಡಿಗೆ ಬರುವುದು ಕಷ್ಟವೇ ? ರಾಯರ ಹಾಗೆ ಅವನೂ ತನ್ನ ಮನೆಯವಳನ್ನೂ ಶಿವದೇವಾಲಯಕ್ಕೆ ಕರೆದು ತಂದಿದ್ದು ತಾನು ಮೇಲುಗೈಯೆಂದು ತೋರಿಸಿಕೊಂಡಿದ್ದರೆ, ಆಗ ರಾಯರಿಗೆ ಚಿಂತೆಗೆ ಕಾರಣವಿರುತ್ತಿದ್ದಿತು. ಅನ್ಯಮತ ಸಹಿಷ್ಣುತೆಯನ್ನು ಗಂಡಸರು ತೋರಿಸುವುದೇನೂ ಅತಿಶಯವಲ್ಲ. ಅದರಲ್ಲಿ ಅಷ್ಟು ಕಷ್ಟವೂ ಇಲ್ಲ.– ಈ ರೀತಿ ಬಾಲಕೃಷ್ಣರಾಯರು ತಮ್ಮ ಮನಸ್ಸಿನ ಮೆದೆಯಿಂದ ಒಣ ಹುಲ್ಲನ್ನು ಹಿರಿದು ಹಿರಿದು ರಾಶಿ ಹಾಕುತ್ತಿದ್ದರು. ಅಲ್ಲದೆ, ಅವನು

ಬಂದುದನ್ನು ಶ್ರೀರಂಗಪಟ್ಟಣದವರಾರೂ ನೋಡಲಿಲ್ಲ. ಇನ್ನು ರಾಯರಿಗೆ ಭಯವೆಲ್ಲಿಯದು ?

ಸಂಜನಗೂಡಿನ ಯಾತ್ರೆಯ ದೆಸೆಯಿಂದ ಬಾಲಕೃಷ್ಣರಾಯರ ಹೆಮ್ಮೆಯು ಎಷ್ಟು ಬೆಳೆದು ಎಷ್ಟು ದೂರ ಹಬ್ಬಿದ್ದಿತೋ, ಗಿರಿಜಾ ಕಲ್ಯಾಣದ ಉತ್ಸವವನ್ನು ನೋಡಿಯೂ ರಾಯರ ಮನಸ್ಸಿನ ಅಸಮಾಧಾನವೂ ಅಷ್ಟೇ ಬೆಳೆದು, ಅಷ್ಟೇ ದೂರ ಹಬ್ಬಿದ್ದಿತು. ಶ್ರೀರಂಗಪಟ್ಟಣಕ್ಕೆ ಹಿಂತಿರುಗಿದ್ದ ದಿನ ಮಧ್ಯಾಹ್ನದ ಮೇಲೆ, ರುಕ್ಮಿಣಿಯಮ್ಮನವರು "ವಾಂಗಿಭಾತನ್ನೂ ಕೀರನ್ನೂ" ಮಾಡಿ, ಪತಿದೇವರಿಗೆ ಸಮರ್ಪಿಸಿದರು. ರಾಯರು ಸುಪ್ರೀತರಾಗಿ "ಇದೀಗ ಸರಿ, ಅಲ್ಲಿ ನಡೆದ ವಿಚಿತ್ರದ ಹಾಗಿಲ್ಲ" ಎಂದರು. ರುಕ್ಮಿಣಿಯಮ್ಮನವರು, ತಮ್ಮ ಪತಿದೇವರು ಹೀಗೆ ಪ್ರಸನ್ನ ಮುಖಮುದ್ರೆಯಿಂದ ಮಾತನಾಡುತ್ತಿದ್ದುದನ್ನು ಕೇಳುತ್ತಿದ್ದುದೇ ಅತಿ ವಿರಳ. ಆದಕಾರಣ ಅವರು ಬಹಳ ಸಂತೋಷದಿಂದ "ಅಲ್ಲಿ ನಡೆದ ವಿಚಿತ್ರ ಅಂದರೆ, ಎಲ್ಲಿ ನಡೆದ ವಿಚಿತ್ರ? ಎಲ್ಲಿ ಎನ್ನೋದನ್ನ ಹೇಳದೆ, ಗೋಡೆ ಕಡೆಗೆ ಕೈ ತೋರಿಸಿ, ಅಲ್ಲಿ ನಡೆದ ವಿಚಿತ್ರ-ಅಂದರೆ ನನ್ನಂಥ ಮೂಢಳಿಗೆ ಅರ್ಥವಾಗುವ ಬಗೆ?" ಎಂದು ಉತ್ತರ ಹೇಳಿ ಮೃದುವಾಗಿ ನಕ್ಕರು.

ರಾಯರು "ಇಷ್ಟು ತಿಳಿಯದಿದ್ದರೆ ಹೇಗೆ? ಅಲ್ಲಿ ಎಂದರೆ ಇನ್ನೆಲ್ಲಿ? ಸಂಜನಗೂಡಿನಲ್ಲಿ—ಅಂತ. ಗಿರಿಜಾಕಲ್ಯಾಣದಲ್ಲಿ ದಂಪತಿಗಳಿಗೆ ಫಲಾಹಾರಕ್ಕೆಂದು ಇದೇ ವಾಂಗೀಭಾತು, ಕರಿದ ಸೇವಿಗೆ ಪಾಯಸ, ಕೋಸಂಬರಿಗಳು ಎಲ್ಲವನ್ನೂ ಬಡಿಸಿದ್ದರು. ಬಂದ ಭಾಗ್ಯವೇನು ಹೇಳು ! ಬಡಿಸಿದ ಎಲೆ ಬಡಿಸಿದ ಹಾಗೇ ಇತ್ತು. ಹೀಗೆ ತಿನ್ನುವವರಿಗಾದರೂ ಬಡಿಸಿದ್ದರೆ?" ಎಂದು ಹೇಳಿ, ಸ್ವಲ್ಪ ಕಿರುನಗೆಯನ್ನು ಸೂಸಿ, ಪ್ರೌಢಿಮೆಯ ಹೆಮ್ಮೆಯ ಠೀವಿಯಿಂದ ಸೆಡೆತು ಕುಳಿತರು. ಅಪೂರ್ವ ವಸ್ತುವಾಗಿದ್ದ ಆ ಕಿರುನಗೆಗೆ ರುಕ್ಮಿಣಿಯಮ್ಮನವರ ಮನಸ್ಸಿನ ಭಂಡಾರದಲ್ಲಿ ಬಹಳ ಬೆಲೆ. ಆದಕಾರಣ, ಅವರು ಉತ್ಸಾಹದಿಂದ ಮೈಮರೆತು "ತಿನ್ನುವವರಿಗೆ ಬಡಿಸಿದ್ದರೆ, ಬಡಿಸಿದುದೆಲ್ಲ ಮಾಯವಾಗುತ್ತಿತ್ತು. ದೇವರು ಊಟಮಾಡಲು ಪ್ರಾರಂಭಿಸಿದರೆ, ಯಾರೂ ಆ ಮೇಲೆ ನೈವೇದ್ಯವನ್ನೇ ಇಡುವುದಿಲ್ಲ. ಅದಿರಲಿ,

ದೇವರುಗಳ ವಿಷಯ; ಹಾಸ್ಯ ಮಾಡಬೇಡಿ; ಗಿರಿಜಾಕಲ್ಯಾಣ ನೋಡಿ ಬಂದ ಪುಣ್ಯ ಕಡಿಮೆಯಾಗಿ ಹೋದೀತು; ಅಮ್ಮನವರಿಗಾಗಲಿ ಸ್ವಾಮಿ ಗಾಗಲಿ ಕೋಪ ಬಂದೀತು; ನಿಮ್ಮ ಧರ್ಮಕ್ಕೆ ಸುಮ್ಮನಿರಿ'' ಎಂದರು.

ರಾಯರು ಗಹಗಹಿಸಿ ನಗುತ್ತ ''ಇದೂ ಸರಿ. ಮಕ್ಕಳ ಚೆಲ್ಲಾ ಟಕ್ಕೆ ಸಂತೋಷಿಸದೆ, ತಾಯಿತಂದೆಗಳೇ ಕೋಪಿಸಿಕೊಳ್ಳುವುದೂ ಉಂಟೆ?'' ಎಂದು ಕೇಳಿದರು.

ರುಕ್ಮಿಣಿಯಮ್ಮನವರೂ ನಗುತ್ತ ''ಮಕ್ಕಳ ವಿಚಾರ ನಿಮಗೆ ಗೊತ್ತಿರುವುದು ಬಹಳ. ಬಹಳ ಮಕ್ಕಳನ್ನು ಕಂಡಿರುವವರ ಹಾಗೆ ಏನೋ ಹೇಳ್ತಾರೆ ಇವರು.'' ಎಂದರು.

ರುಕ್ಮಿಣಿಯಮ್ಮನವರು ನಗುತ್ತಿದ್ದರೂ ಆ ನಗುವಿನ ತೆರೆಯ ಹಿಂದೆ ಮಕ್ಕಳಿಲ್ಲದ ದುಃಖವು ಭೂತದಂತೆ ಅಡಗಿಕೊಂಡಿದ್ದಿತು. ರಾಯ ರಿಗೆ ಅದರ ಮರ್ಮವು ತಿಳಿಯದು. ಅವರು ಅಣಕದ ನಗುವಿನಿಂದ ''ಓಹೋ ಹಾಗೋ? ಮಕ್ಕಳನ್ನು ಕಾಣಬೇಕೆಂಬ ಹರಕೆಯಿಂದಲೋ ಸವಾರಿ ಗಿರಿಜಾಕಲ್ಯಾಣಕ್ಕೆ ದಯಮಾಡಿಸಿದ್ದು?'' ಎಂದು ಕೇಳಿದರು.

ಲೋಕಾಭಿರಾಮವಾಗಿ ರಾಯರು ಕೇಳಿದ ಪ್ರಶ್ನೆಯು, ರುಕ್ಮಿಣಿ ಯಮ್ಮನವರನ್ನು ಬೆಚ್ಚುವಂತೆ ಮಾಡಿತು. ರಾಯರ ಕುಶಾಗ್ರಬುದ್ಧಿಯು ತಮ್ಮ ಗುಟ್ಟನ್ನು ರಟ್ಟುಮಾಡಿತೆಂದು ಅವರು ನಿರ್ಧರಿಸಿದರು. ಶ್ರೀಕಂಠೇ ಶ್ವರನು ಅಷ್ಟೇನೂ ಹೆಚ್ಚು ಕರುಣಾಶಾಲಿಯಲ್ಲದಿದ್ದರೂ, ಹೊಸ ''ಮದು ಮಗಳು'' ಗಿರಿಜಾತಾಯಿಯು ತಮ್ಮ ಕೋರಿಕೆಯನ್ನು ಸಲ್ಲಿಸುವ ಳೆಂದು ರುಕ್ಮಿಣಿಯಮ್ಮನವರಿಗೆ ಭರವಸೆ; ಆದರೆ ತಮ್ಮ ಪತಿಯ ಪರಿಹಾಸ್ಯ ದಿಂದ ಆಕೆಗೆ ಕೋಪ ಬಂದರೆ, ಕಾರ್ಯವು ಕೆಟ್ಟು ಹೋದೀತೆಂದೂ ಅವ ರಿಗೆ ಶಂಕೆ. ಗಿರಿಜಾಕಲ್ಯಾಣದ ನೋಟವನ್ನು ನೋಡಿ, ನೊಂದಿಸ ಸಾಗ ರದಲ್ಲಿ ಮಿಂದಿದ್ದ ಅವರ ಮನಸ್ಸು, ನಿಜವಾಗಿ ಗಿರಿಜಾಕಲ್ಯಾಣವು ಅದೇ ವರ್ಷ ನಡೆಯಿತೆಂದೇ ನಂಬಿದ್ದಿತು.

ರಾಯರ ಹಾಸ್ಯಾಲಾಪವನ್ನು ನಿಲ್ಲಿಸುವ ಬಯಕೆಯಿಂದ ರುಕ್ಮಿಣಿ ಯಮ್ಮನವರು ''ಹರಕೆಯೋ ಗಿರಕೆಯೋ ಅದೆಲ್ಲ ನಿಮಗೇಕೆ? ವಾಂಗಿ

ಭಾತೂ ಕೀರೂ ಚೆನ್ನಾಗಿದೆಯೋ ಇಲ್ಲವೋ ನೋಡಿ. ಸಿಕ್ಕಿದ ಹಾಗೆ ಮಾತನಾಡಿ ದೇವರಿಗೆ ಕೋಪ ಬರುವ ಹಾಗೆ ಮಾಡಬೇಡಿ. '' ಎಂದರು.

ರಾಯರು ಮತ್ತಷ್ಟು ನಕ್ಕು '' ಈ ಅರ್ಚಕರ ಕೈಗೆ ಸಿಕ್ಕಿ ದೇವರ ಪಾಡು ಬಹಳ ಕಷ್ಟಕ್ಕಿಟ್ಟಿದೆಯೆಂದರೆ, ದೇವರಿಗೇಕೆ ಕೋಪ? ಉರಿಗಣ್ಣನ್ನು ತೆರೆದ ಮಾತ್ರಕ್ಕೇ ಹದಿನಾಲ್ಕು ಲೋಕಗಳನ್ನೂ ಸುಟ್ಟು ಬೂದಿ ಮಾಡುವ ಸಾಮರ್ಥ್ಯವುಳ್ಳ ರುದ್ರದೇವರು, ಕಳ್ಳನ ಕೈಗೆ ಸಿಕ್ಕಿ ಪಾಡು ಪಟ್ಟ ಹಾಗೆ. ವಿಗ್ರಹಗಳನ್ನು ಮೆರೆಯಿಸಿ ರಗಳೆ ಮಾಡ್ತಾರೆ. ಪೂಜಾರಿಯ ಕೈಗೆ ಸಿಕ್ಕಿದ ಮೇಲೆ ದೇವರೂ ಕಿರುಗುಟ್ಟಿ ಹೋಗೋರೇ! ಅಲ್ಲಿ ಪುರೋಹಿತರೇ ಸೇರಿ ಉರುಟಣೆ ಮಾಡಿಕೊಂಡರು. ಸ್ವಾಮಿಯ ಕಡೆಯ ಅರ್ಚಕರು 'ಎನ್ನರಸಿ, ಚೆನ್ನರಸಿ' ಹೇಳಿದರು. ಅಮ್ಮನವರ ಕಡೆಯ ಅರ್ಚಕರು 'ಎನ್ನರಸ ಚೆನ್ನರಸ' ಹೇಳಿದರು. ಹಾಗೆ ಮಾಡದೆ. ನಮ್ಮಂಥ ದಂಪತಿಗಳನ್ನು ಲಕ್ಷಣವಾಗಿ ಹಸೆಯಮೇಲೆ ಕೂಡಿಸಿ, 'ಎನ್ನರಸ ಚೆನ್ನರಸ' ಹೇಳಿಸಿ, ಉರುಟಣೆ ಮಾಡಿದ್ದರೆ, ಶ್ರೀಕಂಠೇಶ್ವರನು ಬೇಡವೆನ್ನುತ್ತಿದ್ದನೇ?' ಎಂದರು.

ರಾಯರ ಕುಹಕವನ್ನು ಕಂಡು, ಅಮ್ಮನವರಿಗೆಷ್ಟು ಕೋಪ ಬಂದಿದೆಯೋ ಎಂದು ಕಳವಳಗೊಂಡು ರುಕ್ಮಿಣಿಯಮ್ಮನವರು ಬಹಳ ಕಿರಿಕಿರಿ ಪಟ್ಟರು. ರಾಯರ ಹುಚ್ಚುಮಾತುಗಳನ್ನು ನಿಲ್ಲಿಸುವ ಕೊನೆಯ ಪ್ರಯತ್ನವಾಗಿ ಅವರು '' ಪಾಪ! ನಿಮ್ಮ ಜೊತೆಗೆ ನನ್ನನ್ನು ಕೂಡಿಸಿದರೇನು ಚೆನ್ನು, ಹೇಳಿ. ಚಿಕ್ಕ ಹೆಂಡತಿಯೊಬ್ಬಳನ್ನು ಕೂಡಿಸಿ ಉರುಟಣೆ ಮಾಡಿಸಬೇಕಾಗಿತ್ತು. ಅವರಿಗೆ ಅದೇಕೋ ತೋರಲೇ ಇಲ್ಲ. ನಿಮಗೆಲ್ಲೋ ಇನ್ನೊಂದು ಮದುವೆಮಾಡಿಕೊಳ್ಳುವ ಆಸೆ. ಒತ್ತಿ ಒತ್ತಿ ಹೇಳಿ, ನಂಜನಗೂಡಿಗೆ ಕರೆದುಕೊಂಡು ಹೋಗುವಂತೆ ನಿಮ್ಮನ್ನು ಕೇಳಿಕೊಂಡದ್ದಕ್ಕೆ ಕೊನೆಗೆ ಒಳ್ಳೆಯ ಫಲವೇ ಸಿಕ್ಕಿತು. ನಿಮಗೆ ಮದುವೆಯ ಹುಚ್ಚು, ಉರುಟಣೆಯ ಆಸೆ– ಅಲ್ಲವೆ?' ಎಂದರು.

ರಾಯರು ಅದಕ್ಕೆ ನಗ್ಗದೆ '' ಉರುಟಣೆ ನೋಡುವ ಆಸೆಯು ಯಾರಿಗೆ ತಾನೆ ಇಲ್ಲ?'' ಎಂದು ಕೇಳಿದರು.

ರುಕ್ಮಿಣಿಯಮ್ಮನವರು ಅದನ್ನು ಕೇಳಿ, ಬಗೆಬಗೆಯಾಗಿ ಶಂಕಿಸಿ

ತಳಮಳಗೊಂಡರು. ಗಿರಿಜಾಕಲ್ಯಾಣವನ್ನು ನೋಡಿ, ಬೆಲ್ಲದ ಸವಿಯಿಂದ ಚಪ್ಪರಿಸುತ್ತಿದ್ದ ಬಾಯಿಗೆ, ಬೇವನ್ನು ಬಲವಂತವಾಗಿ ತುರುಕಿದಂತಾಯಿತು. ರಾಯರು ತಮ್ಮ ಮನಸ್ಸಿಗೆ ಬೇಕೆಂದು ತೋರಿದುದನ್ನು ಸಾಧಿಸಿಯೇ ಸಾಧಿಸುವ ಛಲಗಾರರೆಂಬ ಅಂಶವು ಅವರ ಮನಸ್ಸಿನ ಮುಂದೆ ಮಿಂಚಿದಂತಾಗಲು, ಅವರು ಭೀತಿಯಿಂದ ನಡುಗಿದರು. ಒಂದೆರಡು ನಿಮಿಷಗಳ ಕಾಲ ಚಿಂತಾಪರವಶರಾಗಿ ನಿಂತಿದ್ದು ಕೊನೆಗೆ "ಒಬ್ಬ ಹೆಂಡತಿ ಬದುಕಿರುವಾಗ ಗಂಡಸರು ಇನ್ನೊಬ್ಬ ಹೆಂಡತಿಯನ್ನು ಮದುವೆಯಾಗುತ್ತಾರೆ; ಇದು ನ್ಯಾಯವೆ?" ಎಂದು ಕೇಳಿದರು.

ಆಗ ರಾಯರು ಏನನ್ನೋ ಯೋಚಿಸುತ್ತಿದ್ದ ಕಾರಣ, ಯಾವುದೋ ಒಂದು ಸ್ವಪ್ನಪ್ರಪಂಚದಿಂದ "ನ್ಯಾಯವಲ್ಲದೆ ಏನು? ಅದು ಶಾಸ್ತ್ರ-ಸಮ್ಮತ ಶಾಸ್ತ್ರವು ಹೇಳುವುದು ನ್ಯಾಯವೇ ತಾನೆ?" ಎಂದರು.

ರುಕ್ಮಿಣಿಯಮ್ಮನವರ ಹೃದಯಕ್ಕೆ ಹಾರೆಯು ನಾಟಿಕೊಂಡಂತಾಗಿ ಅವರು ವ್ಯಥೆಯಿಂದ ತಲ್ಲಣಿಸಿದರು. ತಕ್ಕಷ್ಟು ಕಾರಣವು ಇನ್ನೂ ಒದಗಿಲ್ಲದಿದ್ದೂ ಸವತಿಮಾತ್ಸರ್ಯದ ಪಿಶಾಚಭೂತವೊಂದು ಅವರ ಮನಸ್ಸನ್ನು ಪ್ರವೇಶಿಸಿ, ವಿಕಟವಾದ ಅಟ್ಟಹಾಸದಿಂದ ನರ್ತನ ಮಾಡಿತು. ಪತಿಯ ಮನಸ್ಸನ್ನು ತಿರುಗಿಸಿ ಕೊಟ್ಟು ಕಾಪಾಡುವಂತೆ, ಅವರು ಹಲವು ದೇವರುಗಳನ್ನು ಮನಸ್ಸಿನಲ್ಲಿಯೇ ಪ್ರಾರ್ಥಿಸುತ್ತ, ಬಗೆಬಗೆಯ ಹರಕೆಗಳನ್ನು ಮಾಡಿಕೊಳ್ಳುತ್ತ, ಚಿತ್ರದ ಬೊಂಬೆಯಂತೆ ಒಂದೆರಡು ನಿಮಿಷಗಳ ಕಾಲ ನಿಂತರು. ರಾಯರು ತಾಂಬೂಲವನ್ನು ಅಗಿಯುತ್ತ ತಮ್ಮ ಸ್ನೇಹಿತನೊಬ್ಬನ ಮನೆಗೆ ಹೊರಟು ಹೋದರು.

೨

ಅದೇ ದಿನ ಸಾಯಂಕಾಲದ ಸುಮಾರಿಗೆ ಬಾಲಕೃಷ್ಣರಾಯರು ತಮ್ಮ ದಿನಚರಿಯ ಪದ್ಧತಿಯಂತೆ, ಈಜಾಡಿ ಸ್ನಾನಮಾಡಲು, ಕಾವೇರೀ ನದಿಯ ಸ್ನಾನಘಟ್ಟಕ್ಕೆ ಬಂದರು. ತಾವು ದಿನಕ್ಕೆರಡು ವೇಳೆ ತಣ್ಣೀರಿನ ಸ್ನಾನ ಮಾಡುತ್ತಿದ್ದುದೇ—ತಮ್ಮ ಜೀವಮಾನದಲ್ಲಿ ತಮಗೆ ಇತರರಂತೆ—ಆಗಾಗ ಹಲವು ಸಾರಿ ಜ್ವರವು ಬಾರದಿದ್ದುದಕ್ಕೆ ಕಾರಣವೆಂದು ರಾಯರ ನಂಬಿಕೆ. ಅವರು ಸ್ನಾನಘಟ್ಟಕ್ಕೆ ಬಂದಾಗಲೆಲ್ಲಾ ಒಟ್ಟೆಯನ್ನು

ಇಡಲು ತಪ್ಪದೆ ಪ್ರೀತಿಯಿಂದ ಉಪಯೋಗಿಸುತ್ತಿದ್ದ ವಿಶಾಲವಾದ ಸೋಪಾನದ ಕಲ್ಲಿನ ಮೇಲೆ, ಇತರರಾರೋ ದಂಪತಿಗಳು ತಮ್ಮ ಸಾಮಾನುಗಳನ್ನಿಟ್ಟಿದ್ದರು. ಬಹುಕಾಲದಿಂದ ಬಂದಿದ್ದ ಪದ್ಧತಿಯನ್ನು ಬಿಟ್ಟು ಬೇರೆ ಕಲ್ಲನ್ನುಪಯೋಗಿಸಲು ರಾಯರಿಗೆ ಇಷ್ಟವಿಲ್ಲ. ಆದ ಕಾರಣ, ಕಲ್ಲು ಬಿಡುವಾಗುವವರೆಗೂ ಕಾದಿರಬೇಕೆಂದು ನಿರ್ಧರಿಸಿ, ಅಲ್ಲಿಯೇ ಕೆಲವು ಹೆಜ್ಜೆಗಳ ದೂರದಲ್ಲಿದ್ದ ಕಲ್ಲುಕಟ್ಟೆಯ ಮೇಲೆ ಕುಳಿತುಕೊಂಡರು. ಆಗಂತುಕನಾದ ಗಂಡುಸು ಸ್ನಾನ ಮಾಡುತ್ತಿದ್ದನು. ಆತನ ಹೆಸರು ಲಕ್ಷ್ಮೀನಾರಣಪ್ಪನವರೆಂದು. ಅವರ ಪತ್ನಿಯ ಹೆಸರು ರಂಗಮ್ಮನವರೆಂದು. ರಂಗಮ್ಮನವರು ಸಾಮಾನುಗಳ ಬಳಿಯಲ್ಲಿ ಕುಳಿತು, ಯಾರನ್ನೋ ನಿರೀಕ್ಷಿಸುವಂತೆ, ದಡದ ಕಡೆಗೆ—ದೂರ ದೂರಕ್ಕೆ—ಆಗಾಗ—ಕುತೂಹಲದ ದೃಷ್ಟಿಯಿಂದ ತಿರುಗಿ ತಿರುಗಿ ನೋಡುತ್ತಿದ್ದರು. ಅತ್ತ ಬಾಲಕೃಷ್ಣರಾಯರು ನದಿಯ ನೀರು ಮಂದಗಮನದಿಂದ ಹರಿಯುತ್ತಿದ್ದುದನ್ನೂ ಸೂರ್ಯನ ಹೊಂಬಿಸಿಲು ಅದರ ಮೇಲೆ ಬಿದ್ದು, ಕರಗಿದ್ದ ಚಿನ್ನದ ಭ್ರಾಂತಿಯನ್ನುಂಟು ಮಾಡುತ್ತಿದ್ದ ಸೊಬಗನ್ನೂ ನೋಡುತ್ತಿದ್ದರು, ಆಗ "ಮುಳುಗುವ ಸೂರ್ಯನು ಈಗ ಈ ನೀರನ್ನು ಬೆಳಗುತ್ತಿದ್ದಾನೆ. ಅವನು ಕಿರಣಗಳನ್ನು ಸೆಳೆದುಕೊಂಡ ಮೇಲೆ, ಈ ನೀರು ಹೇಗೆಲ್ಲ ತೊಳಗುವುದು ? ನಮ್ಮ ಜೀವನದ ಹೊಳೆಯ ನೀರೂ ಹೀಗೆಯೇ ಅಲ್ಲವೆ? ಭಗವಂತನ ದಯೆಯ ಕಿರಣಗಳು ಪಸರಿಸಿರುವ ವರೆಗೆ ಆ ನೀರೂ, ಬೆಳಗಿ ನಲಿದಾಡುವುದಲ್ಲವೆ? ಆ ಮೇಲೆ? ಆ ಮೇಲೆ?" ಎಂದು ಅವರ ಮನಸ್ಸು ಪ್ರಶ್ನೆಗಳನ್ನು ಹಾಕಿ, ವಿಚಾರತರಂಗವನ್ನೆಬ್ಬಿಸಿತು. ಒಡನೆಯೇ ಅವರ ಬುದ್ಧಿಯು "ಆ ಮೇಲೆ ಉಳಿದಿರುವುದು ಚಿನ್ನದ ಕಾಂತಿಯಲ್ಲ, ನೀಲಿಮೆಯ ತೆರೆ" ಎಂದು ಉತ್ತರ ಹೇಳಿತು. ರಾಯರು ಒಂದೆರಡು ನಿಮಿಷಗಳ ಕಾಲ ಬಗೆಬಗೆಯ ವಿಚಾರತರಂಗಗಳಲ್ಲಿ ಮುಳುಗುಹಾಕುತ್ತಿದ್ದರು. ಕೊನೆಗೆ ಅವರು ತಮ್ಮ ಮನಸ್ಸಿನಲ್ಲಿ " ದೇವರ ಅನುಗ್ರಹವು ಜೀವನವನ್ನು ಬೆಳಗುತ್ತಿರುವಾಗ, ಸರಿಯಾದ ಕೆಲಸ ಮಾಡದೆ ಮನುಷ್ಯರು ಪ್ರಮಾದವನ್ನೇ ಮಾಡುವರು. ಗಿರಿಜಾಕಲ್ಯಾಣವೆಂದು ಹೆಸರಿಟ್ಟು, ಕೆಲಸಕ್ಕೆ ಬಾರದ ತುಚ್ಛಮನುಷ್ಯರನ್ನು ಪರ್ವತರಾಜನ ಪ್ರತಿನಿಧಿ

ಗಳೆಂದೂ ಶಿವನ ಸಂಗಡಿಗರ ಪ್ರತಿನಿಧಿಗಳೆಂದೂ ಜೀಗತಸಕ್ಕೆ ಬಿಟ್ಟು, ದೊಡ್ಡವರೆಲ್ಲಾ ಸೇರಿ ಕಣ್ಣುಕಟ್ಟಿಸ ಆಟವನ್ನಾಡುವರಲ್ಲಾ! ಅದಕ್ಕೆ ಬದಲು ಒಡಹುಡುಗಿಯೊಬ್ಬಳನ್ನು ತಂದು, ಗಿರಿಜಾಕಲ್ಯಾಣದ ಸವಿಸೆಸ ಪಿಸ ಮೇಲೆ ಸಾಲಂಕೃತ ಕನ್ಯಾದಾನ ಮಾಡಿ, ದೇವರ ಉತ್ಸವದ ಹಿಂದೆ ನೂತನ ದಂಪತಿಗಳ ಮೆರೆವಣಿಗೆಯನ್ನೇರ್ಪಡಿಸಿದ್ದರೆ, ಪಾರ್ವತೀ ಪರ ಮೇಶ್ವರರಿಗೆ ಸಂತೋಷವಾಗುತ್ತಿರಲಿಲ್ಲವೆ? ಆ ರೀತಿ ಮಾಡದೆ, ಮನು ಷ್ಯರನ್ನು ಪರ್ವತರಾಜನ ಮತ್ತು ದೇವರ ಪ್ರತಿನಿಧಿಗಳೆಂದು ಸಾರಿ,ಎಂಥ ಪಾಪವನ್ನು ಮಾಡಿದರು! ಅವರ ಬೊಂಬೆಯ ಕುಣಿತದಲ್ಲಿ ಭಾಗಿಯಾದ ನನಗೂ ಅವರ ಪಾಪದಲ್ಲಿ ಪಾಲಿದೆಯಲ್ಲವೆ? ಪಾಮರರ ಈ ಮರುಳಾಟ ವನ್ನು ಕಂಡು, ಪಾರ್ವತೀಪರಮೇಶ್ವರರಿಗೆಷ್ಟು ಸಂಕಟವಾಗಿದೆಯೋ ಬಲ್ಲವರಾರು? ಇತರರನ್ನು ಆಕ್ಷೇಪಿಸಲು ನನಗೆಲ್ಲಿಯ ಅಧಿಕಾರ? ಅಥವಾ ನಾನೂ ಪಾಪದಲ್ಲಿ ಭಾಗವನ್ನು ಪಡೆದ ಮೇಲೆ, ನನಗೂ ಪ್ರಾಯ ಶ್ಚಿತ್ತವಾಗಬೇಡವೇ?" ಎಂದು ಗುಣಿತ ಹಾಕಿ, ಕೊನೆಗೆ ಪ್ರಾಯಶ್ಚಿತ್ತ ವಾಗಬೇಕೆಂದೇ ನಿರ್ಧರಿಸಿದರು. ಪ್ರಾಯಶ್ಚಿತ್ತವು ಒಡವೆಯಾದ ಕನ್ಯೆಯ ಮದುವೆಯ ವ್ಯವಸ್ಥೆಯ ರೂಪವನ್ನೇ ತಳೆಯಬೇಕೆಂದೂ ಸಿದ್ಧಾಂತ ಮಾಡಿದರು.

ಅಷ್ಟರಲ್ಲಿ ಆಗಂತುಕರ ಸಾಮಾನುಗಳಿದ್ದ ಸ್ಥಳದಿಂದ "ಅಮ್ಮಾ! ನೋಡು, ಈ ಹೂವುಗಳ ಸೊಗಸನ್ನು ನೋಡಮ್ಮ" ಎಂಬ ಮಾತುಗಳು ಕೇಳಿಸಿದುವು. ರಾಯರು ತಿರುಗಿ ನೋಡಿ, ಬೆಕ್ಕಸ ಬೆರಗಾದರು. ವಯಸ್ಸು ಹನ್ನೆರಡಾದರೂ ದೇಹಪುಷ್ಟಿಯಲ್ಲಿ ಹದಿನಾಲ್ಕು ವರ್ಷ ವಯಸ್ಸನ್ನು ಮೀರಿಸಿದ ಹುಡುಗಿಯೊಬ್ಬಳು ಕಾವೇರಿಯ ತೀರಪ್ರದೇಶದಿಂದ ತಾನು ಕೊಯ್ದು ತಂದಿದ್ದ, ಬಗೆಬಗೆಯ ಬಣ್ಣಗಳ ಹೂಗಳನ್ನು ತಾಯಿಗೆ ತೋರಿಸುತ್ತಾ ನಿಂತಿದ್ದಳು. ದಿಗಂತದ ಕಡೆಗೆ ಜಾರುವುದಕ್ಕಾಗಿ ಇಳಿ ಮೊಗವಾಗಿದ್ದ ಸೂರ್ಯಬಿಂಬದ ಹೊಂಬಿಸಿಲು ಮುಖದ ಮೇಲೆ ಬಿದ್ದು, ಅವಳ ರೂಪವು ಇಮ್ಮಡಿಯಾಗಿ ರಮಣೀಯವಾಗಿದ್ದಿತು. ಬಾಲವಯ ಸ್ಸಿಗೆ ತಕ್ಕ ಮುಗ್ಧಭಾವವು ಆ ರೂಪಕ್ಕೆ ಒಪ್ಪವಿಕ್ಕಿದ್ದಿತು. ಮನುಷ್ಯ ರನ್ನು ದೇವರ ಪ್ರತಿನಿಧಿಗಳೆಂದು ಭಾವಿಸುವುದು ಪಾಪವೆಂದು ಸಿದ್ಧಾಂತ

ಮಾಡಿದ್ದ ಬಾಲಕೃಷ್ಣರಾಯರ ಮನಸ್ಸು ಕೂಡ ಅವಳ ಸೌಂದರ್ಯಕ್ಕೆ ಮನಸೋತು, ತನ್ನ ಸಿದ್ಧಾಂತವನ್ನು ಕ್ಷಣಕಾಲ ಮರೆತು, ಅವಳು "ಕನ್ಯಕಾ ಪರಮೇಶ್ವರಿ"ಯಂತಿದ್ದಳೆಂದು ಭ್ರಮಿಸಿತು.

ರಂಗಮ್ಮನವರು ಸಂಭ್ರಮದಿಂದ ಮೇಲಕ್ಕೆದ್ದು ಮಗಳನ್ನಪ್ಪಿ, "ಬಂದೆಯಾ ತಾಯಿ! ಎಲ್ಲಿ ಹೋದೆಯೋ ಎಂದು ನಾನು ಆ ಕಡೆಗೆ ತಿರುಗಿ ತಿರುಗಿ ನೋಡುತ್ತಲೇ ಇದ್ದೆ" ಎಂದು ಹೇಳಿ, ಮಗಳನ್ನೇ ದೃಷ್ಟಿಸಿ ನೋಡುತ್ತ ನಿಂತರು. ಮಗಳ ರೂಪವು ತಾಯಿಯ ಪ್ರೇಮದ ದೆಸೆಯಿಂದ ದ್ವಿಗುಣಿತವಾಗಿ, ತಾಯಿಯ ಮನಸ್ಸನ್ನು ಮುಗ್ಧಗೊಳಿಸುವ ಸಮ್ಮೋಹಿನೀ ಪ್ರಯೋಗವಾಗಿ ಪರಿಣಮಿಸಿತು. ರಂಗಮ್ಮನವರು ಮಗಳ ಕೆನ್ನೆಗೆ ಮುತ್ತಿಟ್ಟು, "ಪುಟ್ಟ! ಗಿರಿಜಾ! ದೃಷ್ಟಿಯಾಗುವಂತಿದ್ದೀಯಲ್ಲೇ! ನಿಜವಾಗಿಯೂ ಕನ್ಯಾಕುಮಾರಿಯಂತಿದ್ದೀಯಮ್ಮ. ನಿನ್ನ ಹೆಸರಿಗೆ ತಕ್ಕ ಹಾಗೆ ಇದ್ದೀಯೆ. ನಿನ್ನ ಕೈ ಹಿಡಿಯುವವನ ಪುಣ್ಯವೇ ಪುಣ್ಯ" ಎಂದರು.

ಅತ್ತ ಬಾಲಕೃಷ್ಣರಾಯರು ತಮ್ಮ ಮನಸ್ಸಿನಲ್ಲಿ "ನಿಜ ನಿಜ; ಅವನ ಪುಣ್ಯವೇ ಪುಣ್ಯ. ಹುಡುಗಿ ಕೈತೊಳೆದು ಮುಟ್ಟುವಂತಿದ್ದಾಳೆ. ಬ್ರಹ್ಮನ ಕೈವಾಡಕ್ಕೂ ಜಾಣತನಕ್ಕೂ ಆದರ್ಶವಾಗಿದ್ದಾಳೆ." ಎಂದು ಕೊಂಡರು.

ತಾಯಿಯು ಆಡಿದ ಮಾತಿಗೆ ನಸುನಾಚಿ, ಗಿರಿಜಾ ಹೂಗಳ ಗೊಂಚಲುಗಳಿಂದ ತಾಯಿಯ ಬೆನ್ನಿನ ಮೇಲೆ ಹೊಡೆದು "ಹೋಗಮ್ಮ, ಹೋಗೆ, ಏನೇನೋ ಹೇಳುತ್ತೀಯೆ". ಎಂದಳು.

ಲಜ್ಜೆಯಿಂದ ಕೆಂಪೇರಿದ ಅವಳ ಮುಖವು ಮತ್ತಷ್ಟು ಸೊಗಸಾಗಿ ರಂಜಿಸಿತು. ತಾಯಿ ಮಗಳ ಸಂಭಾಷಣೆಯನ್ನು ಕೇಳಿ, ಲಕ್ಷ್ಮೀನಾರಣಪ್ಪನವರು ನಿಟ್ಟುಸಿರನ್ನು ಬಿಟ್ಟು, "ತ್ರಿಕಾಲಸ್ನಾನ ಮಾಡುತ್ತೇನೆ. ಯಾವ ಕರ್ಮಕ್ಕೂ ಲೋಪವಿಲ್ಲದಂತೆ ಕರ್ಮಠನಾಗಿದ್ದೇನೆ. ಆದರೂ ಬೇತಾಳ ಮಾತ್ರ ಬೆನ್ನುಬಿಡುವಂತಿಲ್ಲ. ಕನ್ಯಾದಾನ ಮಾಡುವ ಪುಣ್ಯ ನನಗೆಲ್ಲಿದೆ ಹೇಳು" ಎಂದು ಹೇಳಿ, ತಲೆಯ ಕೂದಲನ್ನು ಚೌಕದಿಂದ ಒರಸಿಕೊಳ್ಳುತ್ತ ನಿಂತರು. ಪತಿಯ ಮಾತನ್ನು ಕೇಳಿ, ರಂಗಮ್ಮನವರೂ

ಸಿಟ್ಟುಸಿರು ಬಿಟ್ಟು "ಋಷಿಗಳ ಹಾಗಿದ್ದೀರಿ. ನಿಮ್ಮನ್ನು ದೂಷಿಸುವ ಜನರಿಗೆ ನಿಜವಾಗಿಯೂ ಕಣ್ಣಿಲ್ಲ. ನೋಡೋಣ, ಹರಕೆ ಹನ್ನೆಡು ವರ್ಷ– ಅಂತ ಹೇಳ್ತಾರೆ. ಹನ್ನೆರಡು ವರ್ಷದಿಂದ ಹರಕೆ ಸಲ್ಲಿಸಿದ್ದೇವೆ. ಆ ಮಹಾ ತಾಯಿಯ ದಯೆ ಹೇಗಿದೇ ಅಂತ ನೋಡೋಣ. ಪೇಚಾಡಬೇಡಿ"ಎಂದು ಸಮಾಧಾನ ಹೇಳಿದರು. ಅದಕ್ಕೆ ಲಕ್ಷ್ಮೀನಾರಣಪ್ಪನವರು "ಆ ಮಹಾ ತಾಯಿ ದಯೆತೋರಿದರೂ ನಮ್ಮೂರಿನ ಮಹಾಜನರಿದ್ದಾರಲ್ಲ-ಮಹಾನು ಭಾವರು! ಅವರು ಒಲಿದರೆ ತಾನೇ ನಮ್ಮ ಕೆಲಸ ಸಿದ್ಧಿಸುವುದು?" ಎಂದರು. ರಂಗಮ್ಮನವರು ಸಿಟ್ಟುಸಿರು ಬಿಟ್ಟು "ಅದೂ ನಿಜ. ಕೆಟ್ಟರೆ ನಗುತ್ತಾರೆ, ಬದುಕಿದರೆ ಹೊಟ್ಟೆ ಕಿವುಚಿಕೊಳ್ಳುತ್ತಾರೆ. ಏನು ಜನವೋ ಹಾಳು ಜನ. ನೀವು ಮಠದವರಿಗಾದರೂ ತಿಳಿಸಬಾರದೇ?" ಎಂದು ಕೇಳಿ ದುದಕ್ಕೆ ಲಕ್ಷ್ಮೀನಾರಣಪ್ಪನವರಿಗೆ ಸ್ವಲ್ಪ ನಗುಬಂದಿತು. "ಆಗ ಉರಿ ಯುವ ಗಾಯಕ್ಕೆ ಉಪ್ಪು ತೂರಿದಂತೆಯೇ. ಮಹಾಜನರ ಅಭಿಪ್ರಾಯ ಕ್ಕೆ ಅವರೇಕೆ ಎದುರು ಹೇಳ್ತಾರೆ? ಅವರು ಸಹಾಯಮಾಡುವ ಭರವಸೆ ಯೇನು? ಪವಿತ್ರಸ್ಥಳವಾದ ಕಾವೇರೀ ತೀರದಲ್ಲಿ ನಿಂತು, ಕೆಟ್ಟ ಯೋಚನೆ ಮಾಡಬಾರದು. ಜನರನ್ನು ನಾವು ಆಕ್ಷೇಪಿಸಿದ್ದು ಸರಿಯಲ್ಲ. ನಮ್ಮ ಪ್ರಾರಬ್ಧಕರ್ಮಕ್ಕೆ ಯಾರೇನು ಮಾಡುವರು?" ಎಂದರು.

ಬಾಲಕೃಷ್ಣರಾಯರು ಮೈಯನ್ನೆಲ್ಲಾ ಕಿವಿಯಾಗಿಸಿ, ಈ ಮಾತು ಗಳನ್ನು ಕೇಳಿದರು. ವಾಸ್ತವ ಸಂಗತಿಗಳೇನೆಂಬುದನ್ನು ತಿಳಿಯಲು ಅವ ರಿಗೆ ಬಹಳ ಕುತೂಹಲವಾಯಿತು. ಗಿರಿಜು, ಮೆಟ್ಟಲಿನ ಮೇಲೆ ಕುಳಿತು ಕಾಲನ್ನು ನೀರಿನಲ್ಲಿ ಇಳಿಯಬಿಟ್ಟುಕೊಂಡು, ಕಾಡುಹೂಗಳನ್ನು ಒಂದೊಂದಾಗಿ ನೀರಿನ ಮೇಲೆ ತೇಲಿಬಿಟ್ಟು, ಅವುಗಳನ್ನು ನೋಡಿ ನೋಡಿ ಆನಂದಿಸುತ್ತಿದ್ದಳು. ರಂಗಮ್ಮನವರು "ಕಾಲು ಜಾರೀತೇ ತಾಯಿ, ಜೋಪಾನ" ಎಂದು ರಾಗವಾಗಿ ಎಳೆದೆಳೆದು ಹೇಳಿ, ಗಂಡನು ಒದ್ದೆ ಮಾಡಿದ್ದ ಬಟ್ಟೆಗಳನ್ನು ಒಗೆಯುತ್ತಿದ್ದರು.

ಬಾಲಕೃಷ್ಣರಾಯರು ತಮ್ಮ ಮಾತಿಗೆ ಅದೇ ಸಮಯವೆಂದು ಭಾವಿಸಿ, ಲಕ್ಷ್ಮೀನಾರಣಪ್ಪನವರು ತಮ್ಮ ಬಳಿಗೆ ಬರುವಂತೆ ಸಂಜ್ಞೆ ಮಾಡಿ ಕರೆದು, ಅವರು ಸಮೀಪಕ್ಕೆ ಬಂದ ಕೂಡಲೆ "ದಯಮಾಡಿ,

ಸ್ವಾಮಿ. ಕೂತುಕೊಳ್ಳಿ. ಸೂರ್ಯನು ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಮುಳುಗುತ್ತಾನೆ. ನೀವು ಇಷ್ಟು ಹೊತ್ತಿನಲ್ಲಿ ಸ್ನಾನಮಾಡಿದ್ದು ನೋಡಿ ಸಂತೋಷವಾಯಿತು. ನಾನೂ ಸ್ನಾನಕ್ಕೇ ಬಂದೆ. ಕೂಡಿ. ನಿಮ್ಮದು ಯಾವ ಊರು? ಎಲ್ಲಿ ಇಳಿದಿದ್ದೀರಿ?'' ಎಂದರು. ರಾಯರು ಸ್ನಾನ ಮಾಡುತ್ತಿದ್ದುದು ಆರೋಗ್ಯದ ಉದ್ದೇಶದಿಂದ. ಲಕ್ಷ್ಮೀನಾರಣಪ್ಪನವರಿಗೆ ಅದು ತಿಳಿಯಲು ಕಾರಣವಿರಲಿಲ್ಲ. ರಾಯರೂ ತಮ್ಮಂತೆಯೇ ತ್ರಿಕಾಲಸ್ನಾನ ಮಾಡುವ ಕರ್ಮಠರೆಂದು ಭಾವಿಸಿ, ಅವರು ಆನಂದಪಟ್ಟು ರಾಯರ ಬಳಿ ಕುಳಿತು "ನಮ್ಮ ಊರೊಂದು ಕೊಂಪೆ, ದೇವರು! ನಂಜನಗೂಡಿಗೆ ಗಿರಿಜಾಕಲ್ಯಾಣ ನೋಡಲು ಹೋಗಿದ್ದೆವು. ಇಲ್ಲಿ ಛತ್ರದಲ್ಲಿ ತಂಗಿದ್ದು, ನಾಳೆ ಮುಂದಕ್ಕೆ ಪ್ರಯಾಣ ಮಾಡುತ್ತೇವೆ. ಈಗ ಹನ್ನೆರಡು ವರ್ಷಗಳಿಂದಲೂ ಭಕ್ತಿಯಿಂದ ಈ ಉತ್ಸವಕ್ಕೆ ತಪ್ಪದೆ–ಪ್ರತಿವರ್ಷವೂ–ಬರುತ್ತಿದ್ದೇವೆ. ಆದರೆ ಪ್ರಯಾಣ ಬಹಳ ಕಷ್ಟ. ಇಂಥ ಯಾತ್ರೆ ತೀರ್ಥಗಳೂ ಉತ್ಸವ ವೈಭವಗಳೂ ಬಡವರಿಗಲ್ಲ.'' ಎಂದರು.

ಸಂಧ್ಯಾಕಾಲದ ಸ್ನಾನವೇ ಅವರಿಬ್ಬರನ್ನೂ ಒಟ್ಟುಗೂಡಿಸುವ ಸಮಾನಧರ್ಮವಾಯಿತು. ಬಾಲಕೃಷ್ಣರಾಯರು "ಮತ್ತಾವ ಯಾತ್ರಾಸ್ಥಳಕ್ಕೂ ಹೋಗದೆ, ನಂಜನಗೂಡಿನ ಗಿರಿಜಾಕಲ್ಯಾಣದ ಉತ್ಸವಕ್ಕೇ ಹನ್ನೆರಡು ವರ್ಷಗಳಿಂದ ಹೋಗಿಬರುವುದಕ್ಕೆ ಕಾರಣವೇನೋ ಇರಬೇಕು. ನನಗೆ ತಿಳಿಸಬಹುದೆ?'' ಎಂದರು.

ಲಕ್ಷ್ಮೀನಾರಣಪ್ಪನವರು "ತಿಳಿಸದೆ ಏನು, ದೇವರು! ಪರಸ್ಥಳದಲ್ಲಿ ನನ್ನಂಥ ಬಡವನನ್ನು ಇಷ್ಟು ಆದರದಿಂದ ಮಾತನಾಡಿಸುವವರು ಯಾರು? ಆದರೆ ನನ್ನದು ದುಃಖದ ಕಥೆ. ವಿಸ್ತರಿಸಿ ಹೇಳಿ ನಿಮ್ಮ ಚಿತ್ತಕ್ಕೆ ಆಯಾಸ ಪಡಿಸಲು ನನಗಿಷ್ಟವಿಲ್ಲ. ನಮ್ಮ ತಂದೆಯವರ ಸ್ನೇಹಿತರೊಬ್ಬರು ಮೃತರಾದರು. ಅವರಿಬ್ಬರಿಗೂ ಏಕದೇಹನ್ಯಾಯ. ಅವರು ಸ್ಮಾರ್ತರು, ನಾವು ವೈಷ್ಣವರು. ಮೃತರ ಮನೆಯವರು ಹನ್ನೊಂದನೆಯ ದಿನದ ಹೊತ್ತಿಗೆ, ಗೋದಾವರೀಬ್ರಾಹ್ಮಣರನ್ನು ಬರಹೇಳಿ ಬರೆದಿದ್ದರು. ಆದರೆ ಅವರು ಬರಲಿಲ್ಲ. ಏಕದೇಹನ್ಯಾಯದಿಂದಿದ್ದ ಸ್ನೇಹಿತನಿಗೆ ಅಪರಕರ್ಮಗಳು ಸರಿಯಾಗಿ ನಡೆಯದೆ ಲೋಪವಾಗುವುವಲ್ಲಾ–

ಎಂದು ನಮ್ಮ ತಂದೆಯವರು ಕಳವಳ ಪಟ್ಟು, ಹನ್ನೊಂದನೆಯ ದಿನದ ಕರ್ಮಕಾಲದಲ್ಲಿ ಸೂತಕಾನ್ನವನ್ನು ತಾವೇ ತಿಂದು ಪ್ರಾಯಶ್ಚಿತ್ತ ಮಾಡಿಕೊಳ್ಳುವುದಾಗಿ ನಿರ್ಧರಿಸಿದರು. ” ಎಂದರು.

ರಾಯರ ಮನಸ್ಸನ್ನಾವರಿಸಿದ್ದ ಹೆಮ್ಮೆಯು ಎಲ್ಲಿಗೋ ಪಲಾಯನ ಮಾಡಿ, ಅವರು ಆಶ್ಚರ್ಯದಿಂದ ಬೆರಗಾದರು. ಒಂದೆರಡು ಕ್ಷಣ ಸ್ತಬ್ಧರಾಗಿ ಕುಳಿತಿದ್ದು ಲಕ್ಷ್ಮೀನಾರಣಪ್ಪನವರು ಮಾತುಗಳನ್ನು ಮುಂದುವರಿಸುವಷ್ಟರಲ್ಲಿ ‘ ನಿಮ್ಮ ತಂದೆ ಎಂಥ ಮಹಾನುಭಾವರು, ಸ್ವಾಮಿ. ಅವರ ಸ್ನೇಹವು ಎಷ್ಟು ದೊಡ್ಡದು ನಮ್ಮಪ್ಪ! ಆ ಮೇಲೆ?’ ಎಂದು ಕೇಳಿದರು.

ಲಕ್ಷ್ಮೀನಾರಣಪ್ಪನವರು ‘‘ ಅವರ ನಿರ್ಣಯವು ನಡೆದೇ ಹೋಯಿತು. ನಮ್ಮ ತಂದೆಯವರ ದರ್ಪವೂ ನಿರ್ಧರವೂ ಅಂಥವು ನೋಡಿ. ಅವರು ಇಟ್ಟ ಹೆಜ್ಜೆಯನ್ನು ಎಂದೂ ಹಿಂದಕ್ಕೆ ತೆಗೆದವರಲ್ಲ. ಸ್ಮಾರ್ತರ ಮನೆಯ ಸೂತಕಾನ್ನ ತಿನ್ನಕೂಡದೆಂದು ಎಷ್ಟೋ ಬೇಡಿದೆವು. ನಾನು ಕೂಡ ಕೇಳಿಕೊಂಡೆ. ಅವರು ಲಕ್ಷ್ಯಮಾಡಲಿಲ್ಲ. ಅವರು ಹೇಳಿದ್ದನ್ನು ಕೇಳೋಣವಾಗಲಿ. ‘‘ಅಯ್ಯೋ ಹುಚ್ಚಪ್ಪ! ಮಾಧ್ವರಿಗಿಂತ ಮೊದಲಿದ್ದವರೆಲ್ಲರೂ ಸ್ಮಾರ್ತರೇ ಅಲ್ಲವೇನೊ ! ಸ್ಮಾರ್ತ ರಕ್ತ ಈಗಲೂ ನಮ್ಮ ದೇಹದಲ್ಲಿದ್ದಂತಾಗಲಿಲ್ಲವೆ? ನಮ್ಮ ಶೀನಣ್ಣ, ಪ್ರೀತಿಯ ಪುತ್ಥಳಿಯಾಗಿದ್ದ. ಅವನು ಸ್ಮಾರ್ತನೂ ಅಲ್ಲ. ವೈಷ್ಣವನೂ ಅಲ್ಲ. ಶ್ರೀವೈಷ್ಣವನೂ ಅಲ್ಲ. ಅವನು ಸ್ನೇಹದ ಅಮೃತಪುತ್ಥಳಿ. ನಾವು ಅವನ ಸ್ನೇಹಕ್ಕೆ ಅಯೋಗ್ಯರು. ಅದಕ್ಕೇ? ದೇವರು ಅವನನ್ನು ತನ್ನ ಹತ್ತಿರಕ್ಕೆ ಸೆಳೆದುಕೊಂಡ. ಅವನ ವಿಚಾರದಲ್ಲಿ ಕರ್ಮಲೋಪಕ್ಕೆ ಅವಕಾಶಕೊಟ್ಟು, ನಾನು ಕಾಗೆಯಂತೆ ಬದುಕಿರಬೇಕೆ? ಪರಲೋಕದಲ್ಲಿ ಅವನನ್ನು ಕಂಡಾಗ ಏನು ಹೇಳಲಿ? ವೈದಿಕಬ್ರಾಹ್ಮಣರಲ್ಲಿ ಅನೇಕರು ಠಕ್ಕುಗಾರರೋ ಮಗು, ಠಕ್ಕುಗಾರರು. ದುಡ್ಡಿನ ಆಸೆ ತೋರಿಸಿ, ಗೋದಾವರೀ ಬ್ರಾಹ್ಮಣರನ್ನು ಕರೆಯಿಸಿ, ಸೂತಕಾನ್ನ ತಿನ್ನಿಸುತ್ತಾರೆ. ಸೂತಕಾನ್ನ ತಿನ್ನುವುದು ನಮಗೆ ನಿಷಿದ್ಧವಾದರೆ ಅವರಿಗಲ್ಲವೆ? ಪರಕೀಯರ ಮಕ್ಕಳನ್ನು ಭಾವಿಗೆ ಬಿಟ್ಟು ಆಳವನ್ನೇಕೆ ನೋಡಬೇಕು?’’ ಎಂದರು. ಆ ಬಳಿಕ

ಸೂತಕಾನ್ನ ತಿಂದರು. ಪ್ರಾಯಶ್ಚಿತ್ತವನ್ನೂ ಮಾಡಿಕೊಂಡರು. ಆದರೆ ಮಹಾಜನರು ಹೊರದೂಡಿದರು. ನಮ್ಮ ತಂದೆಯವರು ಹೆದರಲಿಲ್ಲ. "ಅಪವಿತ್ರಃ ಪವಿತ್ರೋವಾ ಸರ್ವಾವಸ್ಥಾಂ ಗತೋಪಿವಾ । ಯಸ್ಸ್ಮರೇತ್ಪುಂಡರೀಕಾಕ್ಷಂ ಸಬಾಹ್ಯಾಭ್ಯಂತರಶ್ಶುಚಿಃ॥ " ಎಂಬುದನ್ನು ಸಂಧ್ಯಾವಂದನೆಯಲ್ಲಿ ಬೊಗಳಿಯೂ ಅರ್ಥತಿಳಿಯದವರ ಗೊಡವೆಯೇ ನನಗೆ ಬೇಡ" ಎನ್ನುತ್ತಿದ್ದು, ಕೊನೆಗೆ ಅವರು ಕಣ್ಣುಮುಚ್ಚಿಕೊಂಡರು. ಮಹಾಜನರು ಅವರ ಮೇಲಿನ ದ್ವೇಷವನ್ನು ನಮ್ಮ ಮೇಲೆ ತೀರಿಸುತ್ತಾರೆ. ನಮಗೆ ಬಹಿಷ್ಕಾರ ಹಾಕಿದ್ದಾರೆ. ಭಾಗ್ಯವಂತರ ಪಾಪಗಳೆಲ್ಲ ಮುಚ್ಚುತ್ತವೆ. ಬಡವರ ಪಾಪಗಳು ಮುಚ್ಚಲು ಹಣದ ಹಚ್ಚಡವಿಲ್ಲ. ಇಷ್ಟಕ್ಕೂ ನಾವು ಮಾಡಿದ ಪಾಪವಾದರೂ ಏನು, ದೇವರು ? ನಾನು ಕರ್ಮಠನಾಗಿದ್ದೇನೆ. ಶಾಸ್ತ್ರರೀತಿ ನಡೆಯುತ್ತಿದ್ದೇನೆ. ಆದರೂ ನಮ್ಮೂರಿನವರಿಗೆ ಕರುಣವಿಲ್ಲ. " ಎಂದರು. ಮಹಾಜನರ ಅತ್ಯಾಚಾರವನ್ನು ಕೇಳಿ, ಬಾಲಕೃಷ್ಣರಾಯರಿಗೆ ರೇಗಿ ಹೋಯಿತು. ಅವರು ರೋಷದ ಆವೇಶದ ಭರದಲ್ಲಿ " ಭ್ರಷ್ಟರು ಅವರು ! ಆ ಊರನ್ನೇ ನೀವು ಬಿಟ್ಟರಾಯಿತು. " ಎಂದರು.

ಲಕ್ಷ್ಮೀನಾರಣಪ್ಪನವರು 'ಊರನ್ನು ಬಿಟ್ಟು ಎಲ್ಲಿಗೆ ಹೋಗೋಣ? ಬಡವರ ಬಾಳು ಗೋಳಿನ ಬಾಳು— ದೇವರು' ಎಂದರು.

ಬಾಲಕೃಷ್ಣರಾಯರು " ಹಾಗೇಕೆ ಪೇಚಾಡುತ್ತೀರಿ ? ನಮ್ಮ ಊರಿನಲ್ಲಿ ನೆಲೆಯಾಗಿ ನಿಂತು ಬಿಡಿ. ನಾವೆಲ್ಲ ಅನುಕೂಲ ಮಾಡಿಕೊಟ್ಟು ಬಿಡುತ್ತೇವೆ." ಎಂದರು.

ಲಕ್ಷ್ಮೀನಾರಣಪ್ಪನವರು ತಮ್ಮ ಕಿವಿಗಳಿಗೆ ಆ ಮಾತುಗಳು ಕೇಳಿಸಿದುದನ್ನೇ ತಾವು ನಂಬಲಾರದೆ, ಕೃತಜ್ಞತೆಯಿಂದ ತುಂಬಿದ ನಗುವನ್ನು ಸೂಸಿದರು.

ಬಾಲಕೃಷ್ಣರಾಯರು ಆ ಬಳಿಕ " ಅದೆಲ್ಲಾ ಸರಿ; ನಿಮ್ಮ ಹನ್ನೆರಡು ವರ್ಷದ ಹರಕೆಯ ಕಥೆಯೇನು ?" ಎಂದು ಕೇಳಲು, ಲಕ್ಷ್ಮೀನಾರಣಪ್ಪನವರು "ಹೆಚ್ಚೇನೂ ಇಲ್ಲ. ನಮ್ಮ ಊರಿನವರಿಗೆ ನಾವು ವ್ಯವಹಾರ

ಬಾಹಿರರಾದ ಕಾರಣ, ನಮ್ಮ ಹುಡುಗಿಗೆ ವಿವಾಹವಾಗುವ ಹಂಬಲೇ ಇಲ್ಲದೆ ಹೋಗಬಹುದೆಂಬ ಶಂಕೆಯೂ ಆತಂಕವೂ ಉಂಟಾದುವು. ಆದ ಕಾರಣ, ಅವಳಿಗೆ ಗಿರಿಜಾ ಎಂದು ಹೆಸರಿಡಬೇಕೆಂದೂ, ಹನ್ನೆರಡು ವರ್ಷ ಗಳ ಕಾಲ ಪ್ರತಿವರ್ಷವೂ ತಪ್ಪದೆ ಗಿರಿಜಾಕಲ್ಯಾಣವನ್ನು ನೋಡಲು ನಂಜನಗೂಡಿಗೆ ಹೋಗಿ ಬರಬೇಕೆಂದೂ ಸಂಕಲ್ಪ ಮಾಡಿದೆವು. ಮುಳುಗಿ ಹೋಗುವವರಿಗೆ ಜೀವವನ್ನು ಉಳಿಸಿಕೊಳ್ಳುವ ಆಸೆ ಬಹಳ ಪ್ರಬಲ, ದೇವರು-ಬಹಳ ಪ್ರಬಲ. ಈಗ ಗೋದಾವರೀ ತೀರಕ್ಕೆ ಹೋಗಿ, ಗೋದಾವರೀ ಬ್ರಾಹ್ಮಣರಲ್ಲಿ ವೈಷ್ಣವ ಪಂಗಡದವರೇನಾದರೂ ಸಿಕ್ಕಿದರೆ, ಅವರಲ್ಲಿ ಗಂಡನ್ನು ಹುಡುಕಿ, ಮಗಳಿಗೆ ಮದುವೆ ಮಾಡಬೇಕೆಂದಿದ್ದೇವೆ. ಆ ಮಹಾತಾಯಿ ಗಿರಿಜಾಮಾತೆಯ ದಯೆಯಿಂದ ನಮ್ಮ ಗಿರಿಜೆಗೊಂದು ಒಳ್ಳೆಯ ಗಂಡು ಸಿಕ್ಕಬೇಕು. ಹುಡುಗಿಗೆ ಹನ್ನೆರಡು ವರ್ಷಗಳಾದುವು. ಮದುವೆ ಮಾಡಿಲ್ಲವೆಂದು ಎಲ್ಲರೂ ಮೂದಲಿಸುತ್ತಿದ್ದಾರೆ. ಆದರೆ ಗಂಡೇ ದೊರೆತಿಲ್ಲ.'' ಎಂದರು.

ಬಾಲಕೃಷ್ಣರಾಯರು "ಗಂಡು ದೊರೆಯದೆ ಏನಂತೆ! ನಿಮ್ಮ ಹುಡುಗಿಯ ಕೈಹಿಡಿಯುವವನ ಪುಣ್ಯವೇ ಪುಣ್ಯ'' ಎಂದರು.

ಆ ಬಳಿಕ ನೈಚ್ಯಾನುಸಂಧಾನಗಳ ಉಪಚಾರವಾಕ್ಯಗಳೆಲ್ಲ ಮುಗಿದ ಮೇಲೆ, ಆಗಂತುಕರು ಮೂವರೂ ಬಾಲಕೃಷ್ಣರಾಯರ ಮನೆಯಲ್ಲಿ ಮೂರು ದಿನಗಳಿರತಕ್ಕುದೆಂದೂ, ನಾಲ್ಕನೆಯ ದಿನದಿಂದ ರಾಯರ ಸಹಾಯ ಪಡೆದು, ಅವರು ರಾಯರ ಮತ್ತೊಂದು ಮನೆಯಲ್ಲಿ ವಾಸ ಮಾಡತಕ್ಕುದೆಂದೂ ಇತ್ಯರ್ಥವಾಯಿತು. ರಾಯರು ಅವರು ಮೂವ ರನ್ನೂ ತಮ್ಮ ಮನೆಗೆ ಕರೆದುಕೊಂಡು ಹೋಗಿ, ತಮ್ಮ ಪತ್ನಿಯೊಡನೆ "ಮಧ್ಯಾಹ್ನ ಮದುವೆಯ ಮಾತನ್ನೂ ಊರುಟಣೆಯ ಮಾತನ್ನೂ ಆಡಿ ದ್ದೆವು. ಈಗ ಮದುವೆಗೆ ಸೊಗಸಾದ ಹುಡುಗಿಯೇ ಸಿಕ್ಕಿತು ನೋಡು'' ಎಂದು ಹೇಳಿದರು. ರುಕ್ಮಿಣಿಯಮ್ಮನವರು ಆ ಮಾತುಗಳನ್ನು ಕೇಳಿ ಬೆಚ್ಚಿದರು; ಅವರ ಮನಸ್ಸಿಗೆ ಬರಸಿಡಿಲು ಒಡಿದಂತಾಯಿತು. ಮರು ಮಾತನಾಡುವುದಕ್ಕೂ ಅವರಿಗೆ ಸಾಮರ್ಥ್ಯವಿರಲಿಲ್ಲ. ದೆಸೆಗೆಟ್ಟಿದ್ದ ಅವರ ಮನಸ್ಸನ್ನು ಅನಿರ್ವಚನೀಯವಾದೊಂದು ಕಗ್ಗತ್ತಲೆಯು ಆವರಿಸಿದ್ದಿತು.

೩

ಅಂದು ರಾತ್ರಿ ರುಕ್ಮಿಣಿಯಮ್ಮನವರಿಗೆ ನೀರವರೋದನದ ಜಾಗರಣೆ. ತಾವು ಬದುಕಿರುವಾಗ ರಾಯರು ಮತ್ತೊಂದು ಮದುವೆ ಮಾಡಿಕೊಳ್ಳ ಕೂಡದೆಂದು ಕಂಠೋಕ್ತವಾಗಿ ತಿಳಿಸಿ, ಆಕ್ಷೇಪಿಸಿ, ಅವರೆದುರಿಗೆ ಕಣ್ಣೀರನ್ನು ಸುರಿಸಬೇಕೆಂದು ರುಕ್ಮಿಣಿಯಮ್ಮನವರು ಮಾಡಿದ ಪ್ರಯತ್ನವು ಸುತರಾಂ ಸಾಗದೆ ಹೋಯಿತು. ಅದಕ್ಕೆ ಹಲವು ಕಾರಣಗಳಿದ್ದುವು.

ಮೊದಲನೆಯದು, ಅವರ ಹೆದರಿಕೆಯ ಸ್ವಭಾವ. ಕಾವ್ಯಗಳಲ್ಲಿ ಅನೇಕ ವೇಳೆ ಅರ್ಥವಿಲ್ಲದೆ ಪ್ರಯೋಗವಾಗುವ 'ಭೀರು' ಎಂಬ ಪದವು ರುಕ್ಮಿಣಿಯಮ್ಮನವರ ನಿಜಸ್ವಭಾವವನ್ನು ವ್ಯಕ್ತಪಡಿಸುತ್ತಿದ್ದಿತು.

ಎರಡನೆಯದು, ರಾಯರ ದರ್ಪ. ಅವರ ದಾಂಪತ್ಯಜೀವನವು ಬಹುಕಾಲ ಸಾಗಿದ್ದರೂ, ಬಾಲಕೃಷ್ಣರಾಯರು ತಮ್ಮ ದರ್ಪದ ಕೋಟೆಯನ್ನು ಬಹು ಭದ್ರವಾಗಿ ಕಾಪಾಡಿಕೊಂಡಿದ್ದರು. ಅವರು ತಮ್ಮ ಹೆಂಡತಿಗೆ ಸ್ವಲ್ಪವೂ ಸಲಿಗೆಯನ್ನು ಕೊಟ್ಟಿರಲಿಲ್ಲ. ಅದು ಸಾಧ್ಯವೇ ? ಎಂದು ಕೆಲವರಿಗೆ ಸಂಶಯವಾಗಬಹುದು. ಅಂತಹವರು ಜನಜೀವನವನ್ನು ಮತ್ತಷ್ಟು ಪರಿಶೀಲಿಸಿ ನೋಡಿದರೆ, ಈಗಿನ ಕಾಲದಲ್ಲಿಯೂ ಅಂತಹದಕ್ಕೆ ಅನೇಕ ನಿದರ್ಶನಗಳನ್ನು ಕಾಣಬಹುದು. ರುಕ್ಮಿಣಿಯಮ್ಮನವರು ಪತಿಯನ್ನು ಆಕ್ಷೇಪಿಸಲಾರದೆ ಹೋದುದಕ್ಕೆ ಮೂರನೆಯ ಕಾರಣವೆಂದರೆ—ಅಂದಿನ ಸಾಮಾಜಿಕ ಪರಿಸ್ಥಿತಿ. ಮನೆಯಲ್ಲಿ ಹೆಂಡತಿಯಿದ್ದೂ ವೇಶ್ಯಾಗೃಹಕ್ಕೆ ತೆರಳುವುದೂ ಒಂದು ಘನತೆಯೆಂಬುದು ಅಂದಿನ ಸಾಮಾಜಿಕ ಭಾವನೆ. ಅಂದಿನ ಸಮಾಜದಲ್ಲಿದ್ದ ಆ ಕೆಟ್ಟ ಗುಣಗಳೊಡನೆ ಅನೇಕ ಒಳ್ಳೆಯ ಗುಣಗಳೂ ಇಂದು ಕೈಬಿಟ್ಟು ಹೋಗಿವೆ. ಯಾವ ಕಾಲದ ಸಮಾಜದಲ್ಲಿಯೂ ಸುಗುಣಗಳೂ ದುರ್ಗುಣಗಳೂ ಎರಡೂ ಇರುತ್ತವೆ. ಅದು ಹೇಗಾದರೂ ಇರಲಿ. ವರನಲ್ಲಿ ವೇಶ್ಯಾಲಂಪಟತನವನ್ನು ಆರೋಪಿಸಿ "ಸಾರವಾಳಿಯ ಸೀರೆ ತಂದು ಸೂಳೆಗೇ ಕೊಟ್ಟಿರಿ" ಎಂದು ಮುಂತಾಗಿ ವಧುವು ಹಾಡಿದರೆ, ಅಂದಿನವರು ಯಾವ ಸಂಕೋಚವೂ ಇಲ್ಲದೆ ಹಿಗ್ಗುತ್ತಿದ್ದರು. ತಮ್ಮ ಪತಿಯಲ್ಲಿ ಅಸಮಾಧಾನವನ್ನು

ಸೂಚಿಸಿದರೆ, ಆಗಿನ ಕಾಲದ ಪದ್ಧತಿಯನ್ನು ಪ್ರಾರಂಭಿಸಿ ತಮ್ಮ ಪತಿಯು ವೇಶ್ಯಾವಾಟಿಗೆ ತೆರಳುವುದಕ್ಕೆ ಅವಕಾಶವಾಗುವುದೋ, ಎಂದು ರುಕ್ಮಿಣಿಯಮ್ಮನವರಿಗೆ ಭಯ.

ಅಲ್ಲದೆ ರುಕ್ಮಿಣಿಯಮ್ಮನವರು ತಮ್ಮ ಬಾಲ್ಯದಲ್ಲಿ ನಗರ ಡಿವಿಜನ್ನಿನಲ್ಲಿ ನಡೆದ ಭಯಾನಕ ವ್ಯಾಪಾರವೊಂದನ್ನು ಕೇಳಿದ್ದರು. ಒಬ್ಬ ಬ್ರಾಹ್ಮಣನು ತನ್ನ ಪತ್ನಿಯು ಕಳಂಕಿತಳೆಂಬ ನಂಬಿಕೆಯ ಮೇಲೆ, ಆಗಿನ 'ಸಮಯಾಚಾರ' ಎಂಬ ಪದ್ಧತಿಯನ್ನವಲಂಬಿಸಿ, ಆಕೆಯನ್ನು ಮತ್ತೊಬ್ಬನಿಗೆ ವಿಕ್ರಯಿಸಿದ್ದನಂತೆ. ಅದನ್ನು ಕೇಳಿದಾಗಿನಿಂದ ಅವರು ಅಂತಹ ಭೀಕರಪ್ರಸಂಗಗಳು ಎಲ್ಲೆಲ್ಲಿ ಎಷ್ಟೆಷ್ಟು ನಡೆಯುತ್ತಿವೆಯೋ ಎಂದು ಭಯಪಡುತ್ತಲೇ ಇದ್ದರು. ಇತರ ಕೆಲವು ಜಾತಿಗಳಲ್ಲಿ "ಸಮಯಾಚಾರ" ಪದ್ಧತಿಯು ಆಚರಣೆಯಲ್ಲಿದ್ದುದನ್ನೂ, ಅದರ ಪರಿಣಾಮವಾಗಿ, ವ್ಯಭಿಚಾರಿಣಿಯಾದ ಹೆಂಡತಿಯನ್ನು ಸಮಯಾಚಾರದ ಚಾವಡಿಗೆ ಕಳುಹಿಸಿ, ಸರ್ಕಾರದ ಅಧಿಕಾರಿಗಳ ಸಹಾಯದಿಂದಲೇ ಇತರರಿಗೆ ದಾಸಿಯಂತೆ ವಿಕ್ರಯಿಸಲು ಗಂಡನಿಗೆ ಹಕ್ಕುಂಟೆಂಬುದನ್ನೂ ರುಕ್ಮಿಣಿಯಮ್ಮನವರು ಕೇಳಿದ್ದರು. ಕೇವಲ ಸಂಶಯಪಿಶಾಚದ ಆವಾಂತರಕ್ಕೊಳಗಾಗಿ, ಕೈಹಿಡಿದ ಗಂಡನೇ ನಿರಪರಾಧಿನಿಯಾದ ತನ್ನ ಹೆಂಡತಿಯನ್ನು ವಿಕ್ರಯಿಸಿದುದಕ್ಕೆ ಅನೇಕ ನಿದರ್ಶನಗಳನ್ನೂ ಅವರು ತಮ್ಮ ತಾಯಿಯಿಂದ ಕೇಳಿ, ಕಣ್ಣೀರನ್ನು ಸುರಿಸಿದ್ದರು. ಆದರೆ "ಸಮಯಾಚಾರ" ಪದ್ಧತಿಯು ಬ್ರಾಹ್ಮಣರಲ್ಲಿಯೂ, ವೈಶ್ಯರಲ್ಲಿಯೂ ಅತಿ ವಿರಳವಾಗಿದ್ದಿತೆಂಬುದೂ, ವ್ಯಭಿಚಾರಿಣಿಯಾದ ಹೆಂಡತಿಯನ್ನು ಬಿಟ್ಟುಬಿಡುತ್ತಿದ್ದುದೇ ಅವರಲ್ಲಿ ನಡೆದುಬರುತ್ತಿದ್ದ ಸಾಮಾನ್ಯ ಸಂಪ್ರದಾಯವೆಂಬುದೂ ಅವರಿಗೆ ತಿಳಿದಿರಲಿಲ್ಲ. ನಗರ ಡಿವಿಜನ್ನಿನಲ್ಲಿ ಬ್ರಾಹ್ಮಣರಲ್ಲಿ ನಡೆದ ಭೀಕರಘಟನೆಯ ವಿಚಾರವನ್ನು ಕೇಳಿದಂದಿನಿಂದ, ಚಿಕ್ಕ ವಯಸ್ಸಿನ ದೋಷವಾದ ವಿಚಾರಹೀನತೆಗನುಸಾರವಾಗಿ ರುಕ್ಮಿಣಿಯಮ್ಮನವರು ಅದನ್ನು ಗುಣಿಸಿ ನೋಡಿ, ಕೇವಲ ಅನುಮಾನದ ಆಧಾರದ ಮೇಲೆ ಕೂಡ, ಹೆಂಡತಿಯನ್ನು "ಸಮಯಾಚಾರದ" ಚಾವಡಿಗೆ ಅಟ್ಟಿಬಿಡಲು ಗಂಡನಿಗೆ ಅಧಿಕಾರವುಂಟೆಂದು ನಿರ್ಧರಿಸಿದ್ದರು. ಒಮ್ಮೆ ಮಾಡಿದ ಆ

ಸಿದ್ಧಾಂತವನ್ನು ಕೆದಕಿ ಕದಲಿಸುವ ಪ್ರಸಕ್ತಿಗೇ ಅವರು ಹೋಗಿರಲಿಲ್ಲ. "ಸಮಯಾಚಾರ" ಪದ್ಧತಿಯು ವಿಶೇಷವಾಗಿ ಆಚರಣೆಯಲ್ಲಿದ್ದ ಪಂಗಡಗಳಲ್ಲಿ ಕೂಡ ವ್ಯಭಿಚಾರವು ತೀರ ಅಲ್ಪವಾಗಿದ್ದ ಕಾರಣ, ಸ್ತ್ರೀವಿಕ್ರಯದ ನಿದರ್ಶನಗಳು ಅತ್ಯಂತ ವಿರಳವಾಗಿ ನಡೆಯುತ್ತಿದ್ದುವೆಂಬುದು ಅವರ ಮನಸ್ಸಿಗೇ ಹೊಳೆದಿರಲಿಲ್ಲ. ರುಕ್ಮಿಣಿಯಮ್ಮನವರು ಗಂಡನ ಮನೆಗೆ ಬಂದ ಮೇಲೆ ಸರ್ಕಾರದವರು "ಸಮಯಾಚಾರ" ಪದ್ಧತಿಯನ್ನು ನಿಲ್ಲಿಸಿದ್ದುದು ಕೂಡ, ಅವರು ಸಂಸಾರವನ್ನು ಪಕ್ರಮಿಸಿ ಅನೇಕ ವರ್ಷಗಳು ಕಳೆದು ಹೋಗಿದ್ದ ಪ್ರಸಕ್ತ ಸಮಯದ ವರೆಗೂ ಅವರಿಗೆ ಗೊತ್ತಿರಲಿಲ್ಲ. ಮೋಟಾರು ಕಾರುಗಳ ಮತ್ತು ವರ್ತಮಾನಪತ್ರಿಕೆಗಳ ಯುಗದಂತಿರುವ ಈಗಿನ ಕಾಲದಲ್ಲಿ ಕೂಡ, ಬಗೆಬಗೆಯ ಅಜ್ಞತೆಗಳ ಅನೇಕ ನಿದರ್ಶನಗಳಿರುವಲ್ಲಿ, ಆಗಿನ ಕಾಲದಲ್ಲಿ ರುಕ್ಮಿಣಿಯಮ್ಮನವರಿಗೆ ಆ ವಿಷಯಗಳು ತಿಳಿದಿರಲಿಲ್ಲವೆಂದು ಆಕ್ಷೇಪಿಸಲು ಕಾರಣವಿಲ್ಲ. ಅಂತು, ಅಂದಿನ ರಾತ್ರಿ ರುಕ್ಮಿಣಿಯಮ್ಮನವರು ತಮ್ಮ ಸ್ಥಿತಿಯು " ಮುಂದೆ ಹೋದರೆ ಕೆರೆ, ಹಿಂದೆ ಬಂದರೆ ಬಾವಿ" ಎಂಬ ಹಾಗಿದ್ದಿತೆಂದು ಭಾವಿಸಿದರು. ಕೊರಗಿ ಕೊರಗಿ ಸಾಕಾಗಿ ನೀರವವಾಗಿ ರೋದಿಸಿದರು. ತಾವು ಪತಿಗೆ ಅಸಮಾಧಾನವಾಗುವಂತೆ ವರ್ತಿಸಿದಲ್ಲಿ, ಪತಿಯೇನಾದರೂ ಆಕ್ರೋಶದಿಂದ ಸುಳ್ಳು ಕಳಂಕವನ್ನಾರೋಪಿಸಿ " ಸಮಯಾಚಾರದ " ಚಾವಡಿಗೆ ಕಳುಹಿಸಿ " ಕೈತೊಳಕೊಂಡರೆ " ಗತಿಯೇನೆಂದು ಚಿಂತಿಸಿ, ಅವರು ಭೀತಿಯಿಂದ ನಡುಗಿದರು. ಇಲ್ಲದುದನ್ನೂ ನಲ್ಲದುದನ್ನೂ ಶಂಕಿಸಿ ಸಂಕಟಪಡುವುದು ಅವರ ಸ್ವಭಾವವಾಗಿದ್ದಿತು.

೪

ದಿನಗಳು ಕಳೆದ ಹಾಗೆಲ್ಲಾ ರುಕ್ಮಿಣಿಯಮ್ಮನವರ ಸಂಶಯವು ಬಲಿಯುತ್ತ ಬಂದಿತು. ಅಪರಿಚಯಸ್ಥರಾದ ಪರಸ್ಥಳದವರಿಗೆ ಆಶ್ರಯಕೊಟ್ಟು ಬಾಲಕೃಷ್ಣರಾಯರು "ರಾಜೋಪಚಾರ" ಮಾಡಿಸಲು ಸೊಂಟವನ್ನು ಕಟ್ಟಿದುದಕ್ಕೆ ಗಿರಿಜಾ ರೂಪವೇ ಕಾರಣವೆಂದು ರುಕ್ಮಿಣಿಯಮ್ಮನವರು ತರ್ಕಿಸಿ ಸಿದ್ಧಾಂತಮಾಡಿದರು. ರಾಯರು ಗಿರಿಜುವನ್ನು ಹೊಗಳಿದಷ್ಟು ರುಕ್ಮಿಣಿಯಮ್ಮನವರ ಹೃದಯದಲ್ಲಿ ಉರಿಯೆದ್ದಿತು. ಆದರೂ

ಅವರು ಹೊರಗೆ ಯಾವುದೊಂದು ಭಾವವನ್ನೂ ತೋರ್ಪಡಿಸದೆ ತಮ್ಮ ಪತಿಯೊಡನೆ "ನಿಮ್ಮ ಮನಸಿಗೆ ಒಂದುದನ್ನು ಮಾಡಿಯೇ ತೀರುತ್ತೀರಿ. ಹೋದವರ್ಷ ಹಿತ್ತಲಿನಲ್ಲಿದ್ದ ಜೇವಿನಮರವನ್ನು ಕಡಿದು ಹಾಕಬೇಕೆಂದು ತೋರಿದಾಗ, ಆ ದಿನ ಬೆಳಿಗ್ಗೆ ಜ್ವರ ಬಿಟ್ಟಿತ್ತೆಂಬುದನ್ನೂ ಲಕ್ಷ್ಯಮಾಡದೆ, ಮರವನ್ನು ಕಡಿದುರುಳಿಸಿ, ಆ ಮೇಲೆ ತಿಂಗಳು ಕಾಯಿಲೆಬಿದ್ದುದಕ್ಕಿಂತಲೆ ?" ಎಂದು ಹೇಳಿ ನಕ್ಕರು. ಬಾಲಕೃಷ್ಣರಾಯರು ಯಾವುದೋ ದೊಡ್ಡ ವಿಷಯವನ್ನು ಪ್ರಸ್ತಾಪಿಸಲು ಹೆಂಡತಿಯು ಈ ರೀತಿ ಅಂಕುರಾರ್ಪಣ ಮಾಡಿರಬೇಕೆಂದು ಭಾವಿಸಿ, ತಾವೂ ನಗುತ್ತ "ನಾನು ಅಂಥವನೆ. ಸಂಸಾರದ ಭಾರವನ್ನು ವಹಿಸುವವನು ಹಾಗೆಯೇ ಇರಬೇಕು. ಹಟವಿಲ್ಲದ ಮನುಷ್ಯ ಹೆಣದ ಹಾಗೆ" ಎಂದರು. ರಾಯರ ನಗುವಿನಿಂದ ಉತ್ತೇಜಿತರಾಗಿ ರುಕ್ಮಿಣಿಯಮ್ಮನವರು "ಆದರೆ ಹಟದಲ್ಲೂ ವಿಚಕ್ಷಣೆ ವಿವೇಚನೆಗಳು ಬೇಡವೆ ? ಈಗ ಪರಸ್ಥಳದವರ ಸಂಸಾರಕ್ಕೆ ಮನೆಕೊಟ್ಟು, ಇಲ್ಲಿ ಸಾಮಾನುಗಳನ್ನೆಲ್ಲಾ ಕಳುಹಿಸಿ, ನೋಪಿಡುವುದು ಯಾವ ದೇವರಿಗೆ ಪ್ರೀತಿ ?" ಎಂದರು. ಬಾಲಕೃಷ್ಣರಾಯರು ಅಮೃತಶಿಲೆಯ ಪ್ರತಿಮೆಯಂತೆ ನಿಂತು 'ಈ ಪ್ರಪಂಚದಲ್ಲಿ ಸ್ವಲ್ಪ ಕಾಲವಿರುವ ನಾವೂ ಪರಸ್ಥಳದವರೇ. ವೈಕುಂಠದ ಒಡೆಯ–ಆ ನಮ್ಮಪ್ಪ ನಮ್ಮೂರಿನಿಂದ ಇಲ್ಲಿಗೆ ಕೆಲವು ವರ್ಷಗಳ ಮಟ್ಟಿಗೆ ನಮ್ಮನ್ನು ಕಳುಹಿಸಿಕೊಟ್ಟಿದ್ದಾನೆ. ಅದೆಲ್ಲಾ ಹೋಗಲಿ. ಆ ಹುಡುಗಿ ಗಿರಿಜು, ದಂತದ ಪ್ರತಿಮೆಯ ಹಾಗಿದ್ದಾಳೆ, ನೋಡು. ಅವಳಿಗಾಗಿ ಇದೆಲ್ಲಾ ಮಾಡಿದೆ" ಎಂದರು. ಈ ಮಾತುಗಳನ್ನು ಕೇಳಿ, ರುಕ್ಮಿಣಿಯಮ್ಮನವರಿಗೆ, ಮೈ ಚಿಟಿಗುಟ್ಟಿ ಹೋಯಿತು. ಆದರೂ ಅತಿಕಷ್ಟದಿಂದ ಸಹಿಸಿಕೊಂಡರು. ತಮ್ಮ ಮನಸ್ಸಿನಲ್ಲಿ "ಗಿರಿಜೆಯಲ್ಲ. ಗಿರಿಜು, ಗಿರಿಜು, ಗಿರಿಜುವಾದಳು. ದಂತದ ಪ್ರತಿಮೆಯಂತೆ. ಆ ಮನುಸ್ಸಿನಲ್ಲಿ ನಾನೇನು ಕಬ್ಬಿಣದ ಪ್ರತಿಮೆಯಾಗಿದ್ದೆನೆ ? ಗಂಡಸರನ್ನು ನಂಬುವುದೇ ಅವಿವೇಕ. ಮಡುವಿನೊಳಗಿನ ಮೊಸಳೆಯನ್ನಾದರೂ ನಂಬಬಹುದು; ಗಂಡಸರನ್ನಲ್ಲ." ಎಂದುಕೊಂಡು, ಅಣಕದ ನಗೆಯಿಂದ "ಹಾಗೇ....ಅಯ್ಯೋ ಅದು ನನಗೆ ತಿಳಿಯಲೇ ಇಲ್ಲ ನೋಡಿ. ತಿಳಿದಿದ್ದರೆ ಇನ್ನೂ ಅಷ್ಟು ಸಾಮಾನು ಕೊಡಿ–ಎಂದು

ಹೇಳ್ತಿದ್ದೆ. ನನ್ನ ಒಂದೆರಡು ಒಡವೆಗಳನ್ನೂ ಕೊಡುತ್ತಿದ್ದೆ. ನನಗೇನು ಬೇಕಾದಷ್ಟು ಒಡವೆಗಳನ್ನು ಮಾಡಿಸಿಟ್ಟಿದ್ದೀರಿ. ಅವಳ ಕೈಹಿಡಿಯುವವನ ಪುಣ್ಯಕ್ಕೆ ಎಣೆಯೇ ಇಲ್ಲ.'' ಎಂದರು.

ರಾಯರು ಅಣಕದ ನಗುವನ್ನರಿಯದೆ '' ನಿನ್ನ ಮನಸ್ಸೆಷ್ಟು ಧಾರಾಳ! ನಿನ್ನ ಸ್ವರೂಪಕ್ಕೆ ತಕ್ಕ ಹೃದಯ. ಗಿರಿಜು ಮನಸ್ಸೂ ಹಾಗೆಯೇ. ನಿನ್ನ ಮನಸ್ಸಿನಂತೆಯೇ ಮೃದು. ನಿನ್ನ ಒಡವೆಗಳನ್ನು ಅವಳಿಗೇಕೆ ಕೊಡಬೇಕು? ಅವಳಿಗಾಗಿ ನಾನೇ ಕೆಲವನ್ನು ಮಾಡಹಾಕಿದ್ದೇನೆ. ಆದರೆ ಅದನ್ನು ಇದುವರೆಗೆ ಯಾರಿಗೂ ತಿಳಿಸಿರಲಿಲ್ಲ '' ಎಂದರು.

ರುಕ್ಮಿಣಿಯಮ್ಮನವರ ಕಣ್ಣಿನಲ್ಲಿ ನೀರು ತುಳುಕಾಡಲು ಪ್ರಾರಂಭವಾಯಿತು. ರಾಯರು ಆ ಕಡೆಗೆ ತಿರುಗಿ ನೋಡುವಷ್ಟರಲ್ಲಿಯೇ ರುಕ್ಮಿಣಿಯಮ್ಮನವರು ಹೊರಟುಹೋದರು. ತಮ್ಮ ಮನೋಭಾವವನ್ನು ತೋರ್ಪಡಿಸದಿರಲು, ಇನ್ನೂ ಹೆಣಗಬೇಕೆಂಬ ಆಶೆಯೊಂದು; ಪ್ರಾಣದೇವರ ಗುಡಿಯ ಅರ್ಚಕರಾದ ನರಸಿಂಹನುಶ್ರೀರ್ಚಾರ್ಯರು ''ರಾಯರೇ ರಾಯರೇ, ನಾಳೆ ತಮ್ಮ ಕಡೆಯಿಂದ ಪ್ರಾಣದೇವರಿಗೆ ಸೇವಾರ್ಥ '' ಎಂದು ಕೂಗಿಕೊಂಡು ದಡದಡನೆ ಒಳಕ್ಕೆ ನುಗ್ಗಿದುದೊಂದು; ಇವೆರಡು ಕಾರಣಗಳಿಂದ, ರುಕ್ಮಿಣಿಯಮ್ಮನವರು ಆ ರೀತಿ ಹೊರಟು ಹೋದರು.

ಅತ್ತ ಲಕ್ಷ್ಮೀನಾರಣಪ್ಪನವರಿಗೂ ರಂಗಮ್ಮನವರಿಗೂ ಬಾಲಕೃಷ್ಣರಾಯರು, ತಮ್ಮ ಮಗಳನ್ನು ವಿವಾಹಮಾಡಿಕೊಳ್ಳುವ ಪ್ರಯತ್ನದಲ್ಲಿದ್ದಾರೆಂಬ ಅನುಮಾನವೇ ಉಂಟಾಯಿತು. ರಾಯರು ಅಪರಿಚಿತರಾದ ತಮಗಾಗಿ ಒಂದು ಮನೆಯನ್ನು ಬಿಟ್ಟುಕೊಟ್ಟು '' ಮೃಷ್ಟಾನ್ನ'' ಭೋಜನಕ್ಕೆ ವ್ಯವಸ್ಥೆಯನ್ನು ಕಲ್ಪಿಸಿದ್ದುದು; ದಿನದಿನವೂ ರಾಯರಿಗೆ ಗಿರಿಜು ಮೇಲಿನ ವ್ಯಾಮೋಹವು ಹೆಚ್ಚಿದುದು; ಅದರ ಪರಿಣಾಮವಾಗಿ ಅವರು ಲಕ್ಷ್ಮೀನಾರಣಪ್ಪನವರು ಮನೆಯಲ್ಲಿಲ್ಲದಿದ್ದಾಗ, ಒಂದುದಿನ ಬಂದು, ತಮ್ಮ ದರ್ಪದಬಿಂಕವನ್ನೂ ಕೂಡ ತೆಗೆದಿಟ್ಟು, ಹುಡುಗಿಯೊಡನೆ ಹುಡುಗನಂತಾಗಿ ಗಾಳಿಯ ಪಟವನ್ನು ಕಟ್ಟಿಕೊಟ್ಟು, ಅವಳೊಡನೆ ಆಟವಾಡಿದುದು; ಹುಡುಗಿಯ ತಾಯಿ ಅದನ್ನು ಕಂಡಾಗ, ರಾಯರು ನಾಚಿಕೆಯಿಂದ ಗಿರಿಜು ಕೈಯಲ್ಲಿ ಪಟವನ್ನು ಕೊಟ್ಟು– ಕಳ್ಳತನದ ಮಧ್ಯದಲ್ಲಿ

ಸಿಕ್ಕಿಬಿದ್ದ ಕಳ್ಳನಂತೆ– ತಮ್ಮ ಮನೆಗೆ ಹೊರಟುಹೋದದ್ದು; ಗಿರಿಜು ಕೈಹಿಡಿಯುವವನು ಭಾಗ್ಯಶಾಲಿಯೆಂದೂ, ಅನೇಕ ಸಂದರ್ಭಗಳಲ್ಲಿ ವರನು ಸವಿಾಪದಲ್ಲಿಯೇ ಇದ್ದರೂ ಕಂಕಣಕಾಲವು ಒದಗುವವರೆಗೂ ಗೋಚರಕ್ಕೇ ಬರುವುದಿಲ್ಲವೆಂದೂ, ಒಂದೆರಡು ಸಾರಿ ರಾಯರು ಹೇಳಿದ್ದುದು; ಇವೇ ಮುಂತಾದ ವರ್ತನೆಯಿಂದ ಆ ಅನುಮಾನವು ದಿನೇದಿನೇ ಬಲವಾಯಿತು. ರಂಗಮ್ಮನವರಿಗೆ ಅದರಿಂದ ಒಟ್ಟಿನಲ್ಲಿ ಸಂತೋಷವೇ ಆಯಿತು. ತಮ್ಮ ಬಡತನದ ವೇಧೆಯನ್ನು ನೀಗಲು, ಅದರಿಂದ ಸಹಾಯವಾದೀತೆಂಬುದು ಅವರ ಹಾರೈಕೆ. ಅವರ ಸಂತೋಷದ ಮುಂದೆ ಬಾಲಕೃಷ್ಣರಾಯರ ವಯಸ್ಸು ಸಲವತ್ತೈಸಕ್ಕೆ ಕಡಮೆಯಾಗಿರಲಿಲ್ಲವೆಂದು ತೋರುತ್ತಿದ್ದ ಅಂಶವು, ಅವರನ್ನು ಅಷ್ಟೇನೂ ಹೆಚ್ಚಾಗಿ ಬಾಧಿಸಲಿಲ್ಲ. ಲಕ್ಷ್ಮೀನಾರಣಪ್ಪನವರಿಗೆ ಈ ಸಂಬಂಧವು ಸರಿಬೀಳಲಿಲ್ಲ. ಸವತಿಯಿರುವ ಮನೆಗೆ ಹೆಣ್ಣುಕೊಡುವುದಂತೂ ಅಕ್ಷಮ್ಯವಾದ ಅಪರಾಧವೆಂದೇ ಅವರು ಭಾವಿಸಿದರು. ರಂಗಮ್ಮನವರು “ ಹೀಗೇಕೆ ಹಾರಾಡುತ್ತೀರಿ? ದಾಕ್ಷಾಯಿಣಿಯು ಮೃತಪಟ್ಟ ಮೇಲಲ್ಲವೇ ಗಿರಿಜಾಕಲ್ಯಾಣವಾದದ್ದು. ಶಿವನಿಗೇ ಎರಡನೆಯ ಮದುವೆ. ಆದರೆ ಆಗ ದಾಕ್ಷಾಯಿಣಿಯಿರಲಿಲ್ಲವೆಂತೀರೇನೋ! ಗಂಗೆಯು ಸವತಿಯಾಗಿ ಸಿದ್ಧವಾಗಿದ್ದಳಲ್ಲಾ! ಪರ್ವತರಾಜ ಸವತಿಯ ಮೇಲೆ ಹೆಣ್ಣನ್ನೇಕೆ ಕೊಟ್ಟ? ಕೃಷ್ಣನಿಗೆಷ್ಟು ಮಂದಿ ಹೆಂಡತಿಯರಿದ್ದರು? ಚಿಕ್ಕಹುಡುಗ ಸಿಕ್ಕಲೆಂದು ನನಗೂ ಆಸೆ. ಆದರೆ ಕಾರ್ಪಣ್ಯಜೀವನವಾಗುವುದಾದರೆ ಚಿಕ್ಕ ವಯಸ್ಸಿನ ಗಂಡು ಬೇಡ. ಹುಡುಗಿ ಸೌಖ್ಯವಾಗಿರೋದನ್ನು ನೋಡಿ ಸಾಯಬೇಕೆಂದು ನನಗೆ ಆಸೆ” ಎಂದಳು. ಬಾಲಿಕಾಭಾವದಿಂದ ಗಿರಿಜು ಬಾಲಕೃಷ್ಣರಾಯರ ಧೋತ್ರದ ಅಂಚನ್ನೂ ಅವರ ಗುಣಗಳನ್ನೂ ಹೊಗಳಿದ್ದುದನ್ನು ವಿಪರೀತವಾಗಿ ಭಾವಿಸಿ, ಅವಳಿಗೆ ಅವರನ್ನು ಮದುವೆಯಾಗಲು ಇಷ್ಟವಿಲ್ಲದಿರಲಾರದೆಂದು ರಂಗಮ್ಮನವರು ನಿರ್ಧರಿಸಿದ್ದರು. ಅಂತು ಗಿರಿಜುವಿಗೆ ತಿಳಿಯದಂತೆ ದಂಪತಿಗಳಿಬ್ಬರೂ ವಾದಿಸಿವಾದಿಸಿ ದಣಿದು ಹೋದರು.

ಒಂದು ದಿನ ಬಾಲಕೃಷ್ಣರಾಯರು ಗಿರಿಜು, ಜಾತಕವನ್ನು ಕೇಳಿದರು. ಆದರೆ ಅವರೇ ಬಂದು ಕೇಳದೆ, ಜಾತಕಕ್ಕಾಗಿ ಹೇಳಿ ಕಳುಹಿಸಿ

ದರು. ಆಗ ದಂಪತಿಗಳಲ್ಲಿ ಬೇಕಾದಷ್ಟು ತರ್ಕವಿತರ್ಕಗಳು ನಡೆದು, ಕೊನೆಗೆ ನಿರ್ವಾಹವಿಲ್ಲದೆ,ಲಕ್ಷ್ಮೀನಾರಣಪ್ಪನವರು ಜಾತಕದ ನಕಲನ್ನು ಕಳುಹಿಸಿದರು. ಅಲ್ಲದೆ "ಜಾತಕದ ನಕಲು ಕೊಟ್ಟರೆ ಲಗ್ನವಾಡಿ ಕೊಟ್ಟಂತಾಯಿತೆ? ಜಾತಕವು ಸರಿಹೋಳದೇ ಹೋಗಿ, ಲಗ್ನಕ್ಕೆ ಅವಕಾಶ ತಪ್ಪಿದರೆ, ಅವರೊಡನೆ ನಿಷ್ಠುರವಾಗಿ ಮಾತನಾಡುವ ಆವಶ್ಯಕತೆಯೇ ತಪ್ಪುವುದು. ಜಾತಕವು ಸರಿಬಿದ್ದು, ಅವರೇನಾದರೂ ಲಗ್ನದ ಪ್ರಸ್ತಾಪ ವನ್ನೆತ್ತಿದರೆ, ಮುಖದ ನೀರನ್ನಿಳುಕಿ ಬಿಡುತ್ತೇನೆ" ಎಂದು, ಅವರು ತಮ್ಮ ಮನಸ್ಸಿನಲ್ಲಿ ಹೇಳಿಕೊಂಡರು. ರಾಯರು ಗಿರಿಜುವಿಗೆ ಹಣ್ಣುಹಂಪಲು ಗಳನ್ನು ತಂದುಕೊಡುತ್ತಿದ್ದುದು, ಅವಳೊಡನೆ ಆಟವಾಡುತ್ತಿದ್ದುದು, ಮುಂತಾದ ಸಂಗತಿಗಳನ್ನು ಕೃತಜ್ಞತೆಯ ಮೊಗವಾಡವನ್ನು ಧರಿಸಿದ್ದ ಹೆಮ್ಮೆ-ಸಂತೋಷಗಳಿಂದ, ರಂಗಮ್ಮನವರು ರುಕ್ಮಿಣಿಯಮ್ಮನವರೊ ಡನೆ ಒಂದು ದಿನ ಹೇಳಿದರು. ರುಕ್ಮಿಣಿಯಮ್ಮನವರು "ಯಾವ ಒಲೆ ಯಲ್ಲಿ ಯಾವ ಕೊಳ್ಳಿಯಾದರೂ ಉರಿಯಲಿ. ನೀವು ಇಲ್ಲಿಗೆ ಬರಲೂ ಬೇಡಿ, ನನಗೆ ಈ ಸಂಗತಿಗಳೊಂದನ್ನೂ ಹೇಳಲೂ ಬೇಡಿ; ಅದು ಅವರವರ ಪಾಡು. ನನಗೆ ಅವುಗಳನ್ನೆಲ್ಲಾ ಕಟ್ಟಿಕೊಂಡು ಆಗಬೇಕಾದ್ದೇನು" ಎಂದು ಔಚಿತ್ಯದ ಮೇರೆಯನ್ನು ಮೀರಿ ನುಡಿದುಬಿಟ್ಟರು. ಹೃದಯದಲ್ಲಿ ಅದುಮಿಟ್ಟಿದ್ದ ರಾಗದ್ವೇಷಗಳು ಈ ರೂಪದಲ್ಲಿ ಹೊರಬಿದ್ದವು. ರಂಗ ಮ್ಮನವರೂ ಆಗ್ರಹವನ್ನು ತೋರಿಸಿ ಹೊರಟುಹೋದರು. ಹಿಂದೆಯೇ ತಿಳಿಸಿದ ಕಾರಣಗಳದೆಸೆಯಿಂದ, ರುಕ್ಮಿಣಿಯಮ್ಮನವರು ಪತಿಗೆ ಅಸಮಾ ಧಾನವಾಗುವ ಹಾಗೆ ನುಡಿಯುವುದನ್ನು ತಮ್ಮಿಂದ ಸಾಧ್ಯವಾಗುವ ವರೆಗೂ ತಡಮಾಡಬೇಕೆಂದು ನಿರ್ಧರಿಸಿ, ಇಕ್ಕಳದಲ್ಲಿ ಸಿಕ್ಕಿದ್ದ ಹಾವಿನಂತೆ ಸಂಕಟಪಡುತ್ತ, ಒಳಗೊಳಗೇ ಬುಸುಗುಟ್ಟುತ್ತಿದ್ದರು.

ಒಂದುದಿನ, ಸುಮಾರು ಮೂರುಜಾವದ ವೇಳೆಯಲ್ಲಿ, ಬಾಲಕೃಷ್ಣ ರಾಯರು ಉತ್ಸಾಹ ಸಂತೋಷಗಳಿಂದ ತಮ್ಮ ಮನೆಯನ್ನು ಹೊಕ್ಕರು. ರುಕ್ಮಿಣಿಯಮ್ಮನವರು ಕಿಟಕಿಯಿಂದ ನಡುಮನೆಯೊಳಕ್ಕೆ ಬಿದ್ದಿದ್ದ ಬಿಸಿಲುಕೋಲಿನಲ್ಲಿ ವಿಧವಿಧದ ವರ್ಣಗಳಿಂದ ತೊಳಗುತ್ತಿದ್ದ ಧೂಳಿಯ ಕಣಗಳನ್ನು ನೋಡುತ್ತ, ಸವತಿಯು ಬರುವ ಸಂಭವವನ್ನೇ ಶಂಕಿಸ

ಬೇಕಾಗಿಲ್ಲದ ಆ ಧೂಳಿಯ ಕಣಗಳ ಬಾಳೇ ಮೇಲೆಂದು, ತಮ್ಮ ಮನಸ್ಸಿನಲ್ಲಿ ಹೇಳಿಕೊಳ್ಳುತ್ತಿದ್ದರು. ಬಾಲಕೃಷ್ಣರಾಯರು ಅವರ ಒಳಿಗೆ ಬಂದು, " ಉತ್ಸವಕಾಲ; ಈಗೇತಕ್ಕೆ ಹೀಗೆ ಜೋಲುಮೋರೆ ಹಾಕಿಕೊಂಡು ನಿಂತಿದ್ದೀಯೆ ? ಗಿರಿಜೂಗೆ ಮದುವೆ. ಧಾರೆಯೆರೆಸಿಕೊಳ್ಳಲು ಸಿದ್ಧವಾಗಬೇಕು. ಎರಡು ಮೂರು ದಿನಗಳಿಗೇ ಲಗ್ನ ಗೊತ್ತಾಗಿದೆ. ನಾವಿಬ್ಬರೂ ಹಸೆಯ ಮೇಲೆ ಕುಳಿತುಕೊಳ್ಳಬೇಕು " ಎಂದರು. ರುಕ್ಮಿಣಿಯಮ್ಮನವರಿಗೆ ಏಕಕಾಲದಲ್ಲಿ ರೋಷ, ಶೋಕ, ಮಾತ್ಸರ್ಯಗಳ ಆವೇಶವುಂಟಾಯಿತು. ಅವರು, ಅಗತ್ಯವಾಗಿ ನೀವಿಬ್ಬರೂ ಹಸೆಯ ಮೇಲೆ ಕೂತುಕೊಂಡು ಲೋಲುಪ್ತಿ ಪಡಿ. ಅದಕ್ಕೆ ಯಾರು ಅಡ್ಡಿಯಾಗಿದ್ದಾರೆ ? ಆನಂದ ಪಡಿ" ಎಂದರು.

ರಾಯರು " ನಾನು ಹೇಳಿದ್ದು—ನಾವಿಬ್ಬರೂ ಹಸೆಯ ಮೇಲೆ ಕೂತುಕೊಳ್ಳಬೇಕೆಂತ. ಧಾರೆಯೆರಿಸಿಕೊಳ್ಳಲು ನೀನು ಸಮ್ಮತಿಸಿ ಹಸೆಯ ಮೇಲೆ ಕೂತುಕೊಳ್ಳದೇ ಹೋದರೆ ಲಗ್ನವೇ ಸಾಗುವಂತಿಲ್ಲ. ನಾನು ಮಾಡಿದ ಏರ್ಪಾಡು ಅಭಾಸಕ್ಕಿಡುತ್ತದೆ. " ಎಂದರು.

ಗಂಡನಿಗೆ ಅಸಮಾಧಾನವಾಗುವಂತೆ ವರ್ತಿಸಕೂಡದೆಂದು, ರುಕ್ಮಿಣಿಯಮ್ಮನವರು ಮಾಡಿಕೊಂಡಿದ್ದ ಸ್ಥಿರಸಂಕಲ್ಪವು ಎಲ್ಲಿಗೋ ಹಾರಿ ಹೋಯಿತು. ಹುಚ್ಚುಹೊಳೆಯು ಏರಿ ಬಂದಾಗ, ಉಕ್ಕಿ ಭೋರ್ಗರೆಯುವ ಪ್ರವಾಹಕ್ಕೆ ಯಾವ ಅಡ್ಡಕಟ್ಟೆಯು ತಾನೆ ಎದುರಾಗಬಲ್ಲದು ? ರುಕ್ಮಿಣಿಯಮ್ಮನವರು ರೋಷದಿಂದ ಗರ್ಜಿಸುತ್ತಾ " ನನ್ನನ್ನು ಮೊದಲು ಕಡಿದುಹಾಕಿ. ನನ್ನ ತಿಥಿ ಪೂರೈಸಿ ಬಿಡಿ, ಆ ಮೇಲೆ ಈ ಮದುವೆ ಏರ್ಪಾಡು ಸಾಂಗವಾಗಿ ನಡೆಯಲಿ. ಅಲ್ಲಿಯವರೆಗೂ ಬೇಡ " ಎಂದರು.

ಬಾಲಕೃಷ್ಣರಾಯರು, ಹೃದಯತಲದಿಂದ ಮೇಲಕ್ಕೇರುತ್ತಿದ್ದ ರೋಷದರ್ಪಗಳ ಚಾಚುನಾಲಿಗೆಯನ್ನು ಹಾಗೆಯೇ ಕೆಳಮುಖಕ್ಕೆ ತಿರುಗಿಸಿ, ಅದುಮಿ " ಗಿರಿಜಾಕಲ್ಯಾಣಕ್ಕೆ ಹೋಗಿ ಬಂದಿದ್ದೇವೆ. ಪಾಪ, ಒಡಹುಡುಗಿಯ ವಿವಾಹಕ್ಕೆ ಏರ್ಪಾಡು ಮಾಡಿದ್ದೇ ತಪ್ಪೇ " ಎಂದರು.

ರುಕ್ಮಿಣಿಯಮ್ಮನವರು ಹಿಂದುಮುಂದು ನೋಡದೆ " ಅಯ್ಯೋ

ಲಕ್ಷ್ಮೀನಾರಣಪ್ಪನವರು "ಹಣಗಾರರು ಏನೆಂದರೂ ತಡೆಯುವುದು ದೇವರು. ತಡೆಯುತ್ತೆ; ಆಡುತ್ತೀರಿ. ವಯಸ್ಸನ್ನೇ ನೋಡದೆ ಮಗಳನ್ನು ಕೊಡೆನ್ನುವಿರೇನು? ಆದಾದರೂ ಹೇಳಿ, ಕೇಳೋಣ" ಎಂದರು.

ಬಾಲಕೃಷ್ಣರಾಯರು "ಅಗತ್ಯವಾಗಿ ವಯಸ್ಸನ್ನು ನೋಡಲೇಬೇಕು. ಆದರೆ ನನ್ನ ವಯಸ್ಸಿನಿಂದ ನಿಮಗಾಗಬೇಕಾದ್ದೇನು?" ಎಂದು ಕೇಳಿದರು.

ಲಕ್ಷ್ಮೀನಾರಣಪ್ಪನವರು "ಸ್ವಲ್ಪಕಾಲ ಅನ್ನವಿಟ್ಟ ಮಾತ್ರಕ್ಕೇ ಈ ರೀತಿ ವೈಯುರಿಸಬಾರದು, ದೇವರು. ಹೀಗೆ ಬಡವನ ಹೊಟ್ಟೆಯುರಿಸಬೇಡಿ. ನಿಮ್ಮ ವಯಸ್ಸನ್ನೇ ಪರಿಗಣಿಸದೆ, ನಿಮಗೆ ಹೆಣ್ಣು ಕೊಡಲೆ! ಹಾಗೆ ಕೊಡಬಹುದೆ?" ಎಂದರು.

ಬಾಲಕೃಷ್ಣರಾಯರು ಆಶ್ಚರ್ಯದಿಂದ ಅಪ್ರತಿಭರಾಗಿ 'ಏನೆಂದಿರಿ?' ಎಂದು ಕೇಳಲು, ಲಕ್ಷ್ಮೀನಾರಣಪ್ಪನವರು ವಿಷಾದದಿಂದಲೂ ಅಸಹ್ಯದಿಂದಲೂ ತುಂಬಿದ ಕಂಠಸ್ವರದಿಂದ "ಕೇಳಿಸಲಿಲ್ಲವೇ, ದೇವರು? ನಾನೊಬ್ಬ ಪಾಪಿಷ್ಠ. ನನ್ನ ಬಡತನವು ನನಗೆ ಈ ಬಗೆಯ ಸಂಕಟವನ್ನು ತಂದಿದೆ. ಆದೃಷ್ಟವಿದ್ದ ಪಕ್ಷಕ್ಕೆ ನಿಮಗೂ ನಮ್ಮ ಗಿರಿಜುವಿಗಿಂತ ಹೆಚ್ಚು ವಯಸ್ಸಿನ ಮಗಳೇ ಇರಬೇಕಾಗಿತ್ತು. ಅಷ್ಟು ವಯಸ್ಸಾಗಿದೆ. ನನಗಿಂತ ವಯಸ್ಸಾಗಿದೆ. ನಿಮ್ಮ ವಯಸ್ಸನ್ನೇ ಪರಿಗಣಿಸದೆ, ನಿಮಗೆ ಹೆಣ್ಣು ಕೊಡಲೆ? ಹಾಗೆ ಕೊಡಬಹುದೆ- ಎಂತ ಹೇಳಿದೆ. ಈಗಲಾದರೂ ಸ್ಪಷ್ಟವಾಗಿ ತಿಳಿಯಿತೆ?" ಎಂದರು.

ಬಾಲಕೃಷ್ಣರಾಯರು ಗಹಗಹಿಸಿ ನಕ್ಕರು. ಅವರು ನಕ್ಕಷ್ಟೂ ಲಕ್ಷ್ಮೀನಾರಣಪ್ಪನವರಿಗೆ ರೇಗಿಹೋಯಿತು. ಲಕ್ಷ್ಮಣರಾಯನೂ ನಗಲಾರಂಭಿಸಿದುದನ್ನು ಕಂಡು, ಅವರ ಕೋಪವು ಮತ್ತಷ್ಟು ಹೆಚ್ಚಿತು.

ಅವರು ಉಚ್ಚಸ್ಥಾಯಿಗೇರಿದ ಕೀರಲು ಧ್ವನಿಯಲ್ಲಿ "ಇನ್ನು ಹೊರಟು ಹೋಗಿ, ಸ್ವಾಮಿ. ನನ್ನ ರೇಗಿಸಬೇಡಿ" ಎನ್ನಲು, ಬಾಲಕೃಷ್ಣರಾಯರು ನಗುವನ್ನು ಕಡಿಮೆ ಮಾಡಿ "ಗಿರಿಜುವನ್ನು ನಾನು ಮದುವೆಯಾಗಬೇಕೆಂದಿದ್ದೇನೆಂಬುದು ನಿಮಗೆ ತಿಳಿದ ಬಗೆ ಹೇಗೆ? ನಿಮಗಿಷ್ಟ

ವಿಲ್ಲದಿದ್ದರೆ ಮೊದಲೇ ಏಕೆ ಹೇಳಲಿಲ್ಲ" ಎಂದು ಮತ್ತೆ ಗಹಗಹಿಸಿ ನಕ್ಕರು.

ಲಕ್ಷ್ಮಣರಾಯನೂ ನಗುತ್ತಿದ್ದನು.

ಲಕ್ಷ್ಮೀನಾರಣಪ್ಪನವರು "ನೀವು 'ಗಿರಿಜು ಗಿರಿಜು' ಎಂದು ಕೂಗುತ್ತ ಅವಳೊಡನೆ ಆಟವಾಡುತ್ತ, ಪ್ರೀತಿಸುತ್ತಿದ್ದುದರಿಂದ, ನೀವು ಅವಳನ್ನು ಮದುವೆಯಾಗಬೇಕೆಂದಿರಬಹುದೆಂದು ತಿಳಿಯಿತು. ವಿವಾಹಕ್ಕೆ ಏರ್ಪಾಡು ಮಾಡಿರುವುದಾಗಿ ನೀವೇ ಹೇಳಿದಿರಿ. ನಮ್ಮ ಊಹೆ ನಿಜವಾಯಿತು. ಧನಿಕರ ಧನಾಢ್ಯತೆಗೆ ಬೆರಗಾಗಿ, ಮಗಳ ಸುಖವನ್ನು ಬಲಿಕೊಡುವ ಆಸೆ ನನಗಿಲ್ಲ. ನಿಮಗೆ ಮೊದಲೇ ತಿಳಿಸದಿದ್ದುದು ಅಪರಾಧವಾಯಿತು ನಿಮ್ಮ ಮುಖದಲ್ಲಿ ರಾಹುಗ್ರಹದ ಯಾವ ಅಂಶವಿದೆಯೋ ತಿಳಿಯದು. ನಿಮ್ಮ ದರ್ಪ ಅಷ್ಟಿಷ್ಟಲ್ಲ. ನಿಮ್ಮ ಮುಖವನ್ನೂ ದರ್ಪವನ್ನೂ ನೋಡಿದರೆ, ಮಾತನಾಡಬೇಕೆಂದು ಬಂದವರ ಬಾಯೇ ಒಣಗಿ ಹೋಗುತ್ತೆ. ಈ ಊರಿನೊಳಗಾಗಿ ನಿಮ್ಮ ದರ್ಪದಿಂದ ನಾಲಗೆಗೆ ಬೀಗವಾಗದಿರುವವಳು ನಮ್ಮ ಗಿರಿಜುವೊಬ್ಬಳೇ. ಈಗ ಯತ್ನವಿಲ್ಲದೇ ಎಲ್ಲವನ್ನೂ ಒದರಿದ್ದೇನೆ. ನನ್ನ ಸಂಕಟವು ನಿಮ್ಮ ದರ್ಪವನ್ನು ಮರೆಯಿಸಿತು. ಇನ್ನು ಮಾತನಾಡಿ ಸಂಕಟಪಡಿಸದೆ ನೀವಿಬ್ಬರೂ ಹೊರಟು ಹೋಗಿ" ಎಂದರು.

ಬಾಲಕೃಷ್ಣರಾಯರು ನಕ್ಕು ನಕ್ಕು ಸಾಕಾಗಿ, ನಗುವಿನ ಮಧ್ಯದಲ್ಲಿ "ಅಯ್ಯೋ ಹುಚ್ಚಪ್ಪ! ನಕ್ಕು ನಕ್ಕು ನನ್ನ ಹೊಟ್ಟೆ ಹುಣ್ಣಾಯಿತು. ಗಂಡನು ಹಸುಗೂಸಿನ ಹತ್ತಿರ ನಿಂತರೂ ವಿವಾಹದ ಯೋಚನೆಯನ್ನು ಕಟ್ಟಿಕೊಂಡು ತೊಳಲ ಬಳಲುವುದೆ? ಬೇರೆ ಬಗೆಯ ಪ್ರೀತಿಯೇ ಪ್ರಪಂಚದಲ್ಲಿರಕೂಡದೆ? ನನಗೆ ಯಾವ ಜನ್ಮಾಂತರದ ಋಣಾನುಬಂಧದಿಂದಲೋ, ಗಿರಿಜೂ ಮೇಲೆ ನನಗೆ ಮಗಳ ಹಾಗೆ ಪ್ರೀತಿ. ಅವಳೆದುರಿಗೆ ನಿಂತಾಗ ನನ್ನ ವಯಸ್ಸೂ ಕೂಡ ಮರೆತು ಹೋಗಿ, ನಾನು ಅವಳ ಜೊತೆಯ ಆಟದ ಹುಡುಗನಾಗುತ್ತಿದ್ದೆ, ನೀವು ಯಾರಾದರೂ ಅದನ್ನು ಕಂಡರೆ ನಾಚಿ, ನಾನಿಳಿದಿದ್ದ ಬಾಲಭಾವದ ಮಡುವಿನಿಂದ ಮೇಲಕ್ಕೆ ಬರುತ್ತಿದ್ದೆ" ಎಂದರು.

ತಂದೆಗೂ ರಾಯರಿಗೂ ಅದುವರೆಗೆ ನಡೆಯುತ್ತಿದ್ದ ವಿರಸವಾದ ಮಾತುಗಳನ್ನು ಕೇಳಿ, ಅರ್ಥವು ಪೂರ್ತಿಯಾಗಿ ತಿಳಿಯದೆ ತತ್ತರಿಸುತ್ತಿದ್ದ ಗಿರಿಜು, ಸರಕ್ಕನೆ ರಾಯರ ಬಳಿಗೆ ಬಂದು ನಿಂತು, ತಂದೆಯ ಕಡೆಗೆ ತಿರುಗಿ "ರಾಯರು ಬಹಳ ಒಳ್ಳೆಯವರೆಂತ ನಾನು ಹೇಳುತ್ತಿರಲಿಲ್ಲವೇನಣ್ಣಾ ?" ಎಂದಳು. ಹಸುವಿನ ಬಳಿಯ ಕರುವಿನಂತೆ ರಾಯರ ಸಮೀಪದಲ್ಲಿ ಗಿರಿಜು ನಿಂತಿದ್ದ ಭಂಗಿಯನ್ನು ಕಂಡು, ರಾಯರ ಮಾತಗಳನ್ನು ಮನನ ಮಾಡಿ, ಲಕ್ಷ್ಮೀನಾರಣಪ್ಪನವರು ವಿಸ್ಮಿತರಾದರು. ಆದರೂ ತಮ್ಮ ಮನಸ್ಸನ್ನು ಅರಿತ ಮೇಲೆ,ರಾಯರು ಈ ಆಟವನ್ನು ಕಟ್ಟಿರಬೇಕೆಂದು ಬಗೆದು "ಇದೇನು ರಾಯರೇ, ಈ ಇಂದ್ರಜಾಲ ? ಮೊದಲು ಹೇಳಿದಿರಿ, ವಿವಾಹಕ್ಕೆ ಆಣೆ ಮಾಡಿರುವುದಾಗಿ. ಈಗ ಹೇಳುತ್ತೀರಿ, ಅದಕ್ಕೆ ವಿರುದ್ಧವಾಗಿ" ಎಂದರು.

ಬಾಲಕೃಷ್ಣರಾಯರು ಹೃದಯದ ನೋವನ್ನು ಮರೆಯಿಸುವ ನಗುವಿನಿಂದ "ಇಂದ್ರಜಾಲವೂ ಇಲ್ಲ, ಮಹೇಂದ್ರಜಾಲವೂ ಇಲ್ಲ. ಸ್ಪಷ್ಟ ವಾಗಿ ಹೇಳುತ್ತೇನೆ ಕೇಳಿ. ನಮ್ಮ ಮನೆಯ ಪಕ್ಕದಲ್ಲಿರುವ ಪಂಡಿತರು ರಘುವಂಶಪಾಠ ಹೇಳುವುದನ್ನು ಪದೇಪದೇ ಕೇಳಿದ್ದೆ. 'ಜಗತಃ ಪಿತರೌ ವಂದೇ ಪಾರ್ವತೀ ಪರಮೇಶ್ವರೌ' ಎಂಬುದನ್ನು ಕೇಳಿ ಕೇಳಿ ಆನಂದಿ ಸಿದ್ದೆ. ಗಿರಿಜಾಕಲ್ಯಾಣದ ಉತ್ಸವವನ್ನು ನೋಡಲು ನಂಜನಗೂಡಿಗೆ ಹೋದೆ. ಅಲ್ಲಿ ನಡೆದ ಮರುಳಾಟ, ಜಗತ್ತಿನ ತಾಯಿತಂದೆಗಳಾದ ಪಾರ್ವತೀಪರಮೇಶ್ವರರಿಗೆ ಅವಮಾನವೆಂದು ತೋರಿತು. ನಿಜವಾಗಿ ಬಡ ಹುಡುಗಿಯೊಬ್ಬಳಿಗೆ ಮದುವೆ ಮಾಡಿಸಿ, ನೋಡಿ, ಆನಂದಿಸಿ, ಅದರ ಫಲ ವನ್ನು ಅವರಿಗೆ ಸಮರ್ಪಿಸಿ, ಜನ್ಮಸಾರ್ಥಕ ಮಾಡಿಕೊಳ್ಳಲು ಆಸೆಯಾ ಯಿತು. ಕನ್ಯಾಕುಮಾರಿಯಂತೆ ನಿಮ್ಮ ಮಗಳು ಗಿರಿಜುವನ್ನು ಕಂಡೆ. ನನ್ನಲ್ಲಿ ಹಣವಿದೆ, ನಿಮ್ಮಲ್ಲಿ ಹುಡುಗಿಯಿದೆ. ಈ ಗಿರಿಜಾಕಲ್ಯಾಣ ಮಾಡಿ ದರೆ, ಆ ಗಿರಿಜಾಕಲ್ಯಾಣಕ್ಕಿಂತ- ಇದೇ ಜಗತ್ತಿನ ಆ ತಾಯಿತಂದೆಗಳಿಗೆ ಹೆಚ್ಚು ಸಂತೋಷವೆಂದು ಭಾವಿಸಿದೆ. ಬಲಗೈ ಧರ್ಮಮಾಡಿದರೆ ಎಡ ಗೈಗೆ ತಿಳಿಯಬಾರದಂತೆ. ಅಷ್ಟರಲ್ಲಿ ಗರ್ವಬಂದೀತೆಂತಲೋ ಏನೋ! ಹಿಂದಿನವರು ಹಾಗೆ ಅಪ್ಪಣೆ ಮಾಡಿದ್ದಾರೆ. ನಾನು ಯಾರಿಗೂ ತಿಳಿಸದೆ ಮದುವೆಗೆ ಏರ್ಪಾಡು ಮಾಡಿದೆ" ಎಂದರು.

# ನಮ್ಮ ಪೋಷಕರು ಮತ್ತು ಸಹಾಯಕರು

ನಮ್ಮ ಗ್ರಂಥಮಾಲೆಗೆ ಪೋಷಕರಾಗಿಯೂ ಸಹಾಯಕರಾಗಿಯೂ ನೆರವಿತ್ತು ನಮ್ಮನ್ನು ಪ್ರೋತ್ಸಾಹಿಸಿದ್ದಕ್ಕಾಗಿ ಕೆಳಗಿನ ಮಹನೀಯರಿಗೆ ನಾವು ತುಂಬಾ ಕೃತಜ್ಞರಾಗಿದ್ದೇವೆ. ಇವರಂತೆ ಸದಭಿಮಾನಿಗಳಾದ ಕನ್ನಡಿಗರೆಲ್ಲರೂ ನಮಗೆ ಪೋಷಕರಾಗಿಯಾಗಲಿ, ಸಹಾಯಕರಾಗಿಯಾಗಲಿ, ಚಂದಾದಾರರಾಗಿಯಾಗಲಿ ಸಹಾಯಮಾಡಿ ಪ್ರೋತ್ಸಾಹಿಸಬೇಕೆಂದು ಪ್ರಾರ್ಥಿಸುತ್ತೇವೆ.

**ಪೋಷಕರು:—**

೧. ಶ್ರೀ. ಚಂದರಗಿ ಗೋವಿಂದರಾಯರು. ಧಾರವಾಡ. ೧೦–೦–೦
೨. ಶ್ರೀ. ಬಳ್ಳಾರಿ ವೀರಭದ್ರಪ್ಪನವರು, ಗದಗ. ೧೦–೦–೦
೩. ಶ್ರೀ. ತಿಪರಾಶಿ ಗೋವಿಂದಗೌಡರು, ಉಗರಗೊಳ್ಳ. ೧೦–೦–೦
೪. ಶ್ರೀ. ಸಿ. ಸಿ. ಅಬಕಾರ, ಬನಹಟ್ಟಿ. ೮–೮–೦

**ಸಹಾಯಕರು:—**

೧. ಶ್ರೀ ಎಸ್. ಎಸ್. ಕೊಯಿಮುತ್ತೂರ, ರಿಟಾಯರ್ಡ
ಅಸಿಸ್ಟೆಂಟ ಕಮೀಶನರ್ ಧಾರವಾಡ. ೫–೦–೦
೨. ಪ್ರೊ. ಎಸ್. ಎಸ್. ಬಸವನಾಳ. M. A.
ಕೆ. ಎಲ್. ಇ. ಆರ್ಟ್ಸ ಕಾಲೇಜ, ಬೆಳಗಾಂವಿ. ೫–೦–೦
೩. ಶ್ರೀ. ದಾತಾರ ಬಳವಂತರಾಯರು, M. A.
ವಕೀಲರು. ಬೆಳಗಾಂವಿ. ೫–೦–೦
೪. ಡಾ. ಎಚ್. ಆರ್. ತೆರಗುಂಡಿ. M. B, B. S.
ಬೆಳಗಾಂವಿ. ೫–೦–೦
೫. ಶ್ರೀ. ನಾರಾಯಣರಾವ ಜೋಶಿ. B. A. L L. B.
ವಕೀಲರು ಬೆಳಗಾಂವಿ. ೫–೦–೦
೬. ಶ್ರೀ. ಎಸ್. ವಿ. ಅಡ್ಡಣಿಗಿ B. A. L L. B
ವಕೀಲರು ಬೆಳಗಾಂವಿ. ೫–೦–೦
೭. ಶ್ರೀ. ಮನೋಹರರಾವ ದೇಶಪಾಂಡೆ B. A. B. T.
ಅಥಣಿ. ೫–೦–೦

೮. ಶ್ರೀ ಅಶ್ವಥರಾವ ಮಹಿಷಿ ಶಿರಹಟ್ಟಿ. ೫-೦-೦

೯. ಶ್ರೀ. ಎಸ್. ಆರ್. ಕುಲಕರ್ಣಿ M. A L. L. B. ಬೈಲಹೊಂಗಲ. ೫-೦-೦

೧೦. ಶ್ರೀ. ಎಂ. ಗೋವರ್ಧನರಾಯರು. ಧಾರವಾಡ. ೫-೦-೦

೧೧. ಶ್ರೀ. ಯಲ್ಲಪ್ಪಾ ಸೋಮಪ್ಪಾ ಗುಂಜಾಳ, ವ್ಯಾಪಾರಿಗಳು ಧಾರವಾಡ. ೫-೦-೦

೧೨. ಶ್ರೀ. ಜಿ. ಎಸ್. ಮಂಜುನಾಥಯ್ಯ ಕಾಫೀ ಪ್ಲಾಂಟರ್ ಸುಂಟಿಕೊಪ್ಪ ಕೊಡಗು. ೫-೦-೦

೧೩. ಶ್ರೀ. ಜಿ. ಜಿ. ಬೀಳಗಿ ಭುಸಾವಳ. ೫-೦-೦

೧೪. ಶ್ರೀ. ಪಿ. ಕೆ. ಎಸ್. ರಾವ್. ರಂಗೂನ ಬರ್ಮಾ ೫-೦-೦

೧೫. ಪ್ರೊ. ವಿ. ಕೆ. ಗೋಕಾಕ M. A ಪುಣೆ. ೫-೦-೦

೧೬. ಪ್ರೊ. ರ. ಶ್ರೀ. ಮುಗಳಿ M. A. B T ಸಾಂಗ್ಲಿ. ೫-೦-೦

೧೭. ಶ್ರೀ. ಪಿ. ಕೆ. ಕಡ್ಲಬಾಳ ದಕ್ಷಿಣಾಫೆಲೊ ಕರ್ನಾಟಕ ಕಾಲೇಜ. ಧಾರವಾಡ. ೫-೦-೦

೧೮. ಶ್ರೀ. ಜಿ. ಜಿ. ಹುಲಕುಂದ B A, L L B. ಅಥಣಿ. ೫-೦-೦

೧೯. ಶ್ರೀ. ಎಸ್. ವಿ. ಗಿಡ್ನವರ B. A ಚೀಫ್ ಆಫೀಸರರು ಗುಳೇದಗುಡ್ಡ. ೫-೦-೦

೨೦. ಶ್ರೀ. ಅರವಿಂದ ಜೋಶಿ B A ಬೆಳಗಾಂವಿ. ೫-೦-೦

೨೧. ಶ್ರೀ. ಗಜೇಂದ್ರಗಡ ಶ್ಯಾಮರಾಯರು B A ಬೆಳಗಾಂವಿ. ೫-೦-೦

೨೨. ಶ್ರೀ. ಕಾಮಲಾಪುರ ಕಾಂತರಾಯರು M. B , B. S. ಧಾರವಾಡ. ೫-೦-೦

೨೩. ಶ್ರೀ. ಹೆಚ್. ವರದಾಚಾರ್ಯ ಮುಗದ. ೫-೦-೦

೨೪. ಕೈ. ವಾ. ಗುಣಾರಿ ತಮ್ಮಣರಾಯರು ಧಾರವಾಡ ೫-೦-೦

೨೫. ಶ್ರೀ. ಬಿ. ಎನ್. ಕುಲಕರ್ಣಿ ಮುಗದ. ೫-೦-೦

೨೬. ಶ್ರೀ. ದೇವರಮನಿ ಆನಂದರಾಯರು ಧಾರವಾಡ. ೫-೦-೦

೨೭. ಶ್ರೀ. ಲಕ್ಷ್ಮಣರಾವ ಜಿ. ಮಕ್ತಾಲಿ ಧಾರವಾಡ. ೫-೦-೦